Price Rs. 3.00/- per copy only



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide
News Magazine

Vol - 8 January - 2009 No. : 01



## BHARAT SCOUTS AND GUIDES, KARNATAKA
## CONVEYS
## Hearty Congratulations
## To
## Hon'ble Chief Minister of Karnataka
## DR. B.S. YEDDYURAPPA

Proud recipient of the Doctorate Honour from Saginaw Valley State University, Michigan, USA

**The Doctor of Laws Honour conferred on the Hon'ble Chief Minister Sri B.S. Yeddyurappa on 12th December 2008 at University Center is a Recognition and Acknowledgment of Four Decades of His Service to Public Life.**




ನಾಂಕ 12-1-09ರಂದು ರಾಷ್ಟ್ರೀಯ ಯುವದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮದಿನಾಚರಣೆ ಅಂಗವಾಗಿ ಬೆಂಗಳೂರಿನ ಅಖಿಲ ರ್ನಾಟಕ ಮಕ್ಕಳ ಕೂಟದಲ್ಲಿ ಜರುಗಿದ ಸಮಾರೋಪ ಸಮಾರಂಭದಲ್ಲಿ ರ್ನಾಟಕ ಜಾನಪದ ಅಕಾಡೆಮಿಯ ಅಧ್ಯಕ್ಷರೂ ಹಾಗೂ ಭಾರತ್ ಸ್ಕೌಟ್ಸ್ ಮತ್ತು ೈಡ್ಸ್ ರಾಜ್ಯ ಸಂಸ್ಥೆಯ ಪ್ರಕಟಣಾ ವಿಭಾಗದ ಅಧ್ಯಕ್ಷರಾದ ್ರೀ ಗೊ.ರು. ಚನ್ನಬಸಪ್ಪರವರು ಮುಖ್ಯಅತಿಥಿಗಳಾಗಿ ಭಾಗವಹಿಸಿ ಮಾತನಾಡುತ್ತಿರುವುದು. ರಾ.ಮು.ಆ. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ್ರೀ ಎಂ. ರಾಮರಾವ್, ಶ್ರೀ ಎನ್. ಶ್ರೀನಿವಾಸನ್, ಶ್ರೀಮತಿ ಬಿ.ವಿ. ರಾಮಲತ, ್ರೀಮತಿ ಬಿ.ವಿ ರಾಮರತ್ನ, ಇತರರು ಸಮಾರಂಭದಲ್ಲಿ ಭಾಗವಹಿಸಿದ್ದರು.





ದಿ 11-01-09 ರಂದು ಹಾವೇರಿ ಜಿಲ್ಲೆಯ ನೂತನ ಜಿಲ್ಲಾ ತರಬೇತಿ ಕೇಂದ್ರ ಬೂ-ವೀರಾಪುರದಲ್ಲಿ ನೂತನವಾಗಿ ನಿರ್ಮಿಸಿದ "ಅಡಿಗೆ ಮನೆ"ಯನ್ನು ಹಾವೇರಿ ಜಿಲ್ಲಾ ಶಾಸಕರಾದ ಮಾನ್ಯ ಶ್ರೀ ನೆಹರು ಚ. ಓಲೇಕಾರ ರವರು ಉದ್ಘಾಟಿಸಿ ಮಾತನಾಡಿದರು. ಸಮಾರಂಭದಲ್ಲಿ ಶ್ರೀಮತಿ ಮಂಜುಳ ಕರಿಬಸಮ್ಮ, ಅಧ್ಯಕ್ಷರು, ಪುರಸಭೆ, ಹಾವೇರಿ, ಶ್ರೀ ಡಿ.ವಿ.ಬೆಲ್ಲದ, ನಿ॥ ಉಪನಿರ್ದೇಶಕರು, ಶ್ರೀ ವೈ.ಎಸ್. ರಾಮನಗೌಡ್ರು, ಶ್ರೀ ನಿಂಗಪ್ಪ ಹೊಸಳ್ಳಿ, ಗ್ರಾ.ಪಂ.ಅಧ್ಯಕ್ಷರು, ಶ್ರೀ ಪ್ರಭಾಕರರಾವ್ ಮಂಗಳೂರ್, ಜಿ.ಮು.ಆ, ಶ್ರೀ ಎ.ವೈ. ಹಾವಕ್ಕನವರ ಅಧ್ಯಕ್ಷರು, ಎಸ್.ಡಿ.ಎಂ.ಸಿ, ಶ್ರೀಮತಿ ಮಾಧುರಿ ದೇವದರ ಜಿ.ಗೈ.ಆ, ಹಾಗು ಇತರ ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು.



ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯವರು ದಿ 2-01-09 ರಿಂದ 6-1-09 ರವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ, ಕೊಂಡಜ್ಜಿ, ದಾವಣಗೆರೆ ಜಿಲ್ಲೆಯಲ್ಲಿ ನಡೆದ 6ನೇ ಜಿಲ್ಲಾ ಮಟ್ಟದ ಕ್ಯಾಂಪೂರಿಯ ಸಮಾರೋಪ ಸಮಾರಂಭದಲ್ಲಿ ಹರಿಹರ ಕ್ಷೇತ್ರದ ಶಾಸಕರಾದ ಮಾನ್ಯ ಶ್ರೀ ಬಿ.ಪಿ.ಹರೀಶ್, ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಚಿತ್ರದಲ್ಲಿ ರಾಜ್ಯ ಸ್ಥಾನಿಕ ಆಯುಕ್ತರಾದ ಶ್ರೀ ಎಂ.ಎ. ಚಲ್ಲಯ್ಯ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಕೆ.ಖಾನ್, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಎಸ್. ಸತೀಶ್, ಜಿಲ್ಲಾ ತರಬೇತಿ ಆಯುಕ್ತ ಶ್ರೀ ಟಿ.ಕೆ. ನಾರಾಯಣಸ್ವಾಮಿ ಅವರುಗಳನ್ನು ಕಾಣಬಹುದು.



"ಕ್ಯಾಂಪೂರಿಯ ಚಟುವಟಿಕೆಗಳ ಕೈಪಿಡಿ"ಯನ್ನು ಬಿಡುಗಡೆ ಮಾಡುತ್ತಿರುವ ದಾವಣಗೆರೆ ತಾಲ್ಲೂಕು ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಎಲ್.ಎಸ್. ಪ್ರಭುದೇವ್, ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಪಿ.ಪಳನಿ, ಜಿಲ್ಲಾ ತರಬೇತಿ ಆಯುಕ್ತ ಶೀ ಟಿ.ಕೆ. ನಾರಾಯಣ ಸ್ವಾಮಿ, ಸಹಕಾರ್ಯದರ್ಶಿ ಶ್ರೀ ಎ.ಎಸ್. ಮಧುಸೂದನ್ ಚಿತ್ರದಲ್ಲಿದ್ದಾರೆ.



ದಿ. 12-01-2009ರಂದು ರಾಜ್ಯ ಸಂಸ್ಥೆಯು ಏರ್ಪಡಿಸಿದ್ದ ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮದಿನಾಚರಣೆ ಸಂದರ್ಭದಲ್ಲಿ ಹಿರಿಯ ಸ್ಕೌಟರ್ ಶ್ರೀ ಎಸ್.ಕೆ.ಆರ್. ಬೋನ್ಸ್ಲೆ ಹಾಗೂ ಅಖಿಲ ಕರ್ನಾಟಕ ಮಕ್ಕಳ ಕೂಟದ ಕಾರ್ಯದರ್ಶಿಗಳಾದ ಶ್ರೀ ಎಂ.ರಾಮರಾವ್ ಅವರುಗಳು ಹಸಿರು ಬಾವುಟ ತೋರಿಸುವುದರ ಮೂಲಕ ಸ್ಕೌಟ್ಸ್/ಗೈಡ್ಸ್‌ಗಳ ಪಥಚಲನವನ್ನು ಉದ್ಘಾಟಿಸಿದರು. ರಾಜ್ಯ ಜಂಟಿ ಕಾರ್ಯದರ್ಶಿಳಾದ ಶ್ರೀ ಎನ್. ಶ್ರೀನಿವಾಸನ್, ಶ್ರೀಮತಿ ಬಿ.ವಿ. ರಾಮಲತ ಮತ್ತು ರಾಜ್ಯ ಸಂಘಟನಾ ಆಯುಕ್ತ ಶ್ರೀ ನಾರಾಯಣ ಶೆಟ್ಟಿ ಹಾಗು ಇತರರು ಚಿತ್ರದಲ್ಲಿದ್ದಾರೆ.



ರಾಷ್ಟ್ರೀಯ ಯುವದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮದಿನಾಚರಣೆ ಸಂದರ್ಭದಲ್ಲಿ ಜರುಗಿದ ಪಥಚಲನೆಯಲ್ಲಿ ಭಾಗವಹಿಸಿದ್ದ ಸ್ಕೌಟ್ಸ್/ಗೈಡ್ಸ್‌ಗಳು ಹಾಗೂ ಸ್ಕೌಟರ್/ಗೈಡರ್‌ಗಳು.



ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆ ದಿ 2-01-09 ರಿಂದ 6-1-09 ರವರೆಗೆ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ, ಕೊಂಡಜ್ಜಿಯಲ್ಲಿ ಏರ್ಪಡಿಸಿದ್ದ 6ನೇ ಜಿಲ್ಲಾ ಮಟ್ಟದ ಕ್ಯಾಂಪೂರಿಯಲ್ಲಿ ಜರುಗಿದ "ಸರ್ವಧರ್ಮ" ಪ್ರಾರ್ಥನೆಯಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳ ವಿಹಂಗಮ ನೋಟ.



ಇತ್ತೀಚೆಗೆ ಹಾವೇರಿ ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ಗಳ ಮೂಲ ತರಬೇತಿ ಹಾಗೂ ಸ್ಕೌಟ್ ಮಾಸ್ಟರ್ ಮುಂದುವರೆದ ತರಬೇತಿ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಹಾವೇರಿ ಜಿಲ್ಲೆ ಶಿಕ್ಷಣ ಇಲಾಖೆ ಉಪನಿರ್ದೇಶಕರು ಹಾಗೂ ಜಿಲ್ಲಾ ಸ್ಕೌಟ್‌ಆಯುಕ್ತರಾದ ಶ್ರೀ. ಎಸ್.ಬಿ. ಕೊಡ್ಲಿರವರು ಅಧ್ಯಕ್ಷತೆ ವಹಿಸಿ ಮಾತನಾಡಿದರು. ಮುಖ್ಯ ಅತಿಥಿಗಳಾಗಿ ಡಾ॥ ಕಲಕೋಟಿ ತಾ.ಪಂ. ಸದಸ್ಯರು, ಶ್ರೀ ಎಸ್.ಜಿ. ಕೋಟೆ, ವಿಷಯ ಪರಿವೀಕ್ಷಕರು, ಶ್ರೀಮತಿ ಮಂಜುಳ ಉಪಾಧ್ಯಕ್ಷರು, ಎಸ್.ಡಿ.ಎಂ.ಸಿ. ಕಬ್ಬೂರು, ಶ್ರೀ ಕೊಟಗಾರ, ಮುಖ್ಯೋಪಾಧ್ಯಾಯರು ಹಾಗೂ ಇತರರು ಭಾಗವಹಿಸಿದ್ದರು.



Price Rs. 3.00/- per copy only



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide

News Magazine

Vol - 8 | JANUARY - 2009 | No. 1




## ಪರಿವಿಡಿ

# ಮುಖ್ಯ ಆಯುಕ್ತರ ನುಡಿ..............................

ಮಾನ್ಯರೇ,

ನಾನು ಡಿಸೆಂಬರ್ ಸಂಚಿಕೆಯಲ್ಲಿ ತಮ್ಮಲ್ಲಿ ಹಂಚಿಕೊಂಡಂತೆ, ಹಲವಾರು ಜಿಲ್ಲಾ ಮತ್ತು ರಾಜ್ಯ ಮಟ್ಟದ ತರಬೇತಿ ಶಿಬಿರಗಳು, ಸಮಾವೇಶಗಳು, ರ್‍ಯಾಲಿಗಳು ಪೆಟ್ರೋಲ್ ಜಾಂಬೋರೇಟ್ ಜನವರಿ ತಿಂಗಳಲ್ಲಿ ರಾಜ್ಯದ ಹಲವಾರು ಜಿಲ್ಲೆಗಳಲ್ಲಿ ಜರುಗಿದ ಬಗ್ಗೆ ರಾಜ್ಯ ಸಂಸ್ಥೆಗೆ ಸಚಿತ್ರ ವರದಿಗಳು ಬಂದಿದ್ದು – ವಿವರಗಳನ್ನು ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ.

ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ಬೆಂಗಳೂರು ದಕ್ಷಿಣ ಜಿಲ್ಲಾ ಆರನೇ ಕ್ಯಾಂಪೂರಿಯ ಉದ್ಘಾಟನೆಯಲ್ಲಿ ದಿನಾಂಕ 2 ಜನವರಿ 09 ರಂದು ಜಿಲ್ಲಾ ಆಯುಕ್ತ ಶ್ರೀ ಪಿ. ಪಳನಿ ಅವರೊಂದಿಗೆ ಭಾಗವಹಿಸಿ, ಬೆಂಗಳೂರಿನಿಂದ ಕ್ಯಾಂಪೂರಿಗೆ ಬಂದಿದ್ದ 580 ಕ್ಕೂ ಹೆಚ್ಚಿನ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್ ಮತ್ತು ಗೈಡ್ಸ್, ರೋವರ್ಸ್, ರೇಂಜರ್ಸ್‌ಗಳನ್ನು, ಘಟಕಗಳ ನಾಯಕ–ನಾಯಕಿಯರನ್ನು ಹಾಗೂ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳನ್ನು ಹೃತ್ಪೂರ್ವಕವಾಗಿ ಅಭಿನಂದಿಸಿದ್ದೇನೆ.

ಜಿಲ್ಲಾ ಸಂಸ್ಥೆಯವರು ಭಾಗವಹಿಸಿದವರೆಲ್ಲರಿಗೂ ಸಾಹಸಮಯ ಚಟುವಟಿಕೆ, ಪಾಲಿಫೈಬರ್ ಸ್ವಿಮಿಂಗ್‌ಪೂಲ್ ನಲ್ಲಿ ಈಜುವಿಕೆ, ಕೊಂಡಜ್ಜಿ ಕೆರೆಯಲ್ಲಿ ದೋಣಿ ವಿಹಾರ ಹಾಗೂ ಊರಿನಲ್ಲಿ ಶ್ರಮದಾನ ಏರ್ಪಡಿಸಿ. 5 ದಿವಸಗಳ ಉತ್ಸವ ಬಹಳ ಯಶಸ್ವಿಯಾಗಿ, ಅದ್ದೂರಿಯಾಗಿ ಜರುಗಿಸಿರುತ್ತಾರೆ. ಕ್ಯಾಂಪ್ಯೂರಿಯ ಹೆಚ್ಚಿನ ವಿವರಗಳನ್ನು ಪ್ರತ್ಯೇಕವಾಗಿ ಪ್ರಕಟಿಸಿದೆ.

ನನಗೆ ತಿಳಿದಿರುವಂತೆ ರಾಜ್ಯದ ಯಾವುದೇ ಜಿಲ್ಲಾ ಸಂಸ್ಥೆಯವರು ಈ ತರಬೇತಿ ಶಿಬಿರದಲ್ಲಿ ಜಿಲ್ಲಾ ಕ್ಯಾಂಪ್ಯೂರಿ ಮಾಡಿರುವುದು ಇದೇ ಮೊದಲು. ಕ್ಯಾಂಪೂರಿಯ ಯಶಸ್ಸಿಗೆ ಕಾರಣರಾದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ. ಕೆ. ಖಾನ್, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಪಿ. ಪಳನಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಎಸ್. ಸತೀಶ್, ಸಹಾಯಕ ಕಾರ್ಯದರ್ಶಿ ಶ್ರೀ ಎ.ಎಸ್. ಮದುಸೂದನ್, ಜಿಲ್ಲಾ ಸ್ಕೌಟ್ ತರಬೇತಿ ಆಯುಕ್ತ ಶ್ರೀ ಟಿ.ಕೆ. ನಾರಾಯಣಸ್ವಾಮಿ, ರೋವರ್ಸ್, ರೇಂಜರ್ಸ್‌ಗಳು ಹಾಗೂ ಜಿಲ್ಲೆಯ ಎಲ್ಲಾ ಪದಾಧಿಕಾರಿಗಳಿಗೆ ನನ್ನ ಅಭಿನಂದನೆ ಹಾಗೂ ಧನ್ಯವಾದಗಳು.

ದಿನಾಂಕ 10 ಜನವರಿ 2009 ರಂದು ಬೆಂಗಳೂರು ಉತ್ತರ ಜಿಲ್ಲೆಯ ಶಿವಾಜಿನಗರ ಸ್ಥಳೀಯ ಸಂಸ್ಥೆ ಗುಡ್‌ವಿಲ್ ಶಾಲೆಯಲ್ಲಿ ಏರ್ಪಡಿಸಿದ ಸ್ಥಳೀಯ ಸಂಸ್ಥೆಯ ರ್‍ಯಾಲಿಯಲ್ಲಿ ಭಾಗವಹಿಸಿದೆ. 400 ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್–ಗೈಡ್ಸ್‌ಗಳು ಶಿಬಿರದಲ್ಲಿದ್ದರು. ಸ್ಥಳೀಯ ಸಂಸ್ಥೆ ಅಧ್ಯಕ್ಷೆ ಶ್ರೀಮತಿ ರತ್ನಾಂಜಲಿ ನಿಕೋಡಮಸ್, ಕಾರ್ಯದರ್ಶಿ ಶ್ರೀಮತಿ ಫ್ಲಾರೆನ್ಸ್ ನೀಲ್, ಖಜಾಂಚಿ ಮಿಸ್ ಕೃಪಾ ವಿಜಯ್, ತರಬೇತಿ ಆಯುಕ್ತೆ ಶ್ರೀಮತಿ ಬಿ. ರೇವತಿ, ಜಿಲ್ಲಾ ಸಹಾಯಕ ಆಯುಕ್ತೆ ಶ್ರೀಮತಿ ಮುನೀರ ಬಿ. ಮಿಸ್ರಿ, ಸಮಾಜಸೇವಕಿ ಹಾಗೂ ಚಳವಳಿಯನ್ನು ಸದಾ ಬೆಂಬಲಿಸುವ ಶ್ರೀಮತಿ ಮಂಜುಳ ರಟಾಡಿಯ, ಗುಡ್‌ವಿಲ್ ಶಾಲೆಯ ಪ್ರಾಂಶುಪಾಲೆ ಶ್ರೀಮತಿ ಜಮೀಲಾ ಪಾಲ್ ರ್‍ಯಾಲಿಯಲ್ಲಿ ಭಾಗವಹಿಸಿದರು.

ದಿನಾಂಕ 11 ಜನವರಿ 2009 ರಂದು ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯವರು ಶ್ರೀ ದುರ್ಗಾಪರಮೇಶ್ವರಿ ಪದವಿಪೂರ್ವ ಕಾಲೇಜು ಆವರಣ ಕಟೀಲಿನಲ್ಲಿ ಏರ್ಪಡಿಸಿದ್ದ ಸ್ಥಳೀಯ ಸಂಸ್ಥೆ ಸಹಾಯಕ ಜಿಲ್ಲಾ ಆಯಕ್ತರುಗಳ, ಕಾರ್ಯದರ್ಶಿಗಳ ಸಮಾವೇಶದಲ್ಲಿ ಭಾಗವಹಿಸಿದೆ. ಸಂಜೆ ಜರುಗಿದ ಜಿಲ್ಲಾ ಸಂಸ್ಥೆ ವಾರ್ಷಿಕ ಮೇಳದ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿದೆ. ಮುಖ್ಯ ಅತಿಥಿಗಳಾಗಿ ಶ್ರೀ ಯು.ಟಿ. ಖಾಧರ್, ಮಾನ್ಯ ಶಾಸಕರು ಮಂಗಳೂರು, ಶ್ರೀ ನಳಿನಕುಮಾರ್ ಕಟೀಲು, ಮಾಜಿ ಕಾರ್ಯಾಧ್ಯಕ್ಷರು, ಬ್ರಹ್ಮಕಲಶೋತ್ಸವ ಸಮಿತಿ ಭಾಗವಹಿಸಿದರು. ಇದೇ ಸಂದರ್ಭದಲ್ಲಿ ರಾಜ್ಯದ ಮಾಜಿ ಸಚಿವರು ಹಾಗು ಕರ್ನಾಟಕ ಸರ್ಕಾರದ ಕರಾವಳಿ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಮಾನ್ಯ ಶ್ರೀ ಬಿ. ನಾಗರಾಜ ಶೆಟ್ಟಿ ಅವರನ್ನು ಜಿಲ್ಲಾ ಸಂಸ್ಥೆ ಪರವಾಗಿ ಪಲಪುಷ್ಪ ತಾಂಬೂಲ–ಮೈಸೂರು ಪೇಟ ಹಾಗೂ ಶಾಲನ್ನು ನೀಡಿ ಸನ್ಮಾನಿಸಿ ಗೌರವಿಸಲಾಯಿತು. ಶಿಬಿರದಲ್ಲಿ 600 ಕ್ಕೂ ಹೆಚ್ಚಿನ ಸ್ಕೌಟ್ಸ್–ಗೈಡ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಐರನ್. ಡಿ ಕುನ್ಹ, ಜಿಲ್ಲಾ ಕಾರ್ಯದರ್ಶಿ ಶ್ರೀ ಪ್ರದೀಪ್ ಕುಮಾರ್ ಕದ್ರಿ ಜಿಲ್ಲಾ ಸ್ಥಾನಿಕ ಆಯುಕ್ತ ಶ್ರೀ ಗೋಪಾಲಕೃಷ್ಣ ಭಟ್, ತರಬೇತಿ ಆಯುಕ್ತೆ ಶ್ರೀಮತಿ ಡಿ. ಸುಫಲ ಹಾಗು ಜಂಟಿ ಕಾರ್ಯದರ್ಶಿ ಶ್ರೀ ಕೆ. ಪ್ರತೀಮ್ ಕುಮಾರ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಶ್ರೀ ಎಂ. ಪ್ರಭಾಕರ್ ಭಟ್ ಹಾಗೂ

ಇತರ ಪದಾಧಿಕಾರಿಗಳು ಮೇಳದ ಯಶಸ್ವಿಗೆ ನೆರವಾದರು. ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ವಿಶೇಷವೆಂದರೆ ಜಿಲ್ಲೆಯಲ್ಲಿ 5 ತಾಲ್ಲೂಕುಗಳಿದ್ದು ಒಟ್ಟು 18 ಸ್ಥಳೀಯ ಸಂಸ್ಥೆಗಳಿವೆ. ಬಹಳ ಮಟ್ಟಿಗೆ ಬೇರೆಲ್ಲು ಈ ರೀತಿಯ ತಾಲ್ಲೂಕುಗಳಿಗಿಂತ ಹೆಚ್ಚಿನ ಸ್ಥಳೀಯ ಸಂಸ್ಥೆಗಳಿರುವುದು ಅಪರೂಪದ ಸಂಗತಿ. ದಕ್ಷಿಣ ಕನ್ನಡ ಜಿಲ್ಲೆಯ ಮಾದರಿಯನ್ನು ಬೇರೆ ಜಿಲ್ಲೆಗಳೂ ಅನುಸರಿಸಿದಲ್ಲಿ – ಸ್ಕೌಟ್‌ಗೈಡ್ ಚಟುವಟಿಕೆಗಳನ್ನು ಜಿಲ್ಲೆಯಾದ್ಯಂತ ವಿಸ್ತರಿಸಲು ಸಹಾಯಕವಾಗುವುದೆಂದು ಭಾವಿಸಿದ್ದೇನೆ. ಮೈಸೂರು ವಿಭಾಗದ ಸಹಾಯಕ ರಾಜ್ಯ ಸ್ಕೌಟ್ ಆಯುಕ್ತ ಹಾಗೂ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಐ.ಎ. ಕೈರನ್ನ ರವರ ಮುಂದಾಳತ್ವದಲ್ಲಿ ಅತ್ಯಂತ ಸಡಗರ ಸಂಭ್ರಮದಿಂದ ಈ ಕಾರ್ಯಕ್ರಮ ಯಶಸ್ವಿಯಾಗಿ ನೆರವೇರಿಸಿದ್ದಕ್ಕೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ಚಿತ್ರದುರ್ಗ ಜಿಲ್ಲಾ ಸಂಸ್ಥೆಯವರು ದಿನಾಂಕ 13 ಜನವರಿ 2009 ರಂದು ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ಆಯೋಜಿಸಿದ್ದ ಕಬ್ ಮಾಸ್ಟರ್, ಸ್ಕೌಟ್ ಮಾಸ್ಟರ್, ಫ್ಲಾಕ್ ಲೀಡರ್‌ಗಳ ಮೂಲ ತರಬೇತಿ ಹಾಗು ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ಗಳ ಮುಂದುವರೆದ ತರಬೇತಿ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಿ, ಜಿಲ್ಲೆಯ ವಿವಿದ ತಾಲ್ಲುಕುಗಳಿಂದ ತರಬೇತಿ ಪಡೆಯಲು ಬಂದಿದ್ದ 135 ಅಭ್ಯರ್ಥಿಗಳನ್ನು ಭೇಟಿಮಾಡಿ– ಚಳವಳಿಯ ಘಟಕಗಳನ್ನು ತಮ್ಮ ಶಾಲೆಗಳಲ್ಲಿ ಪ್ರಾರಂಭಿಸಿ ಚಳವಳಿಯನ್ನು ಬೆಂಬಲಿಸಲು ಕೋರಿದ್ದೇನೆ. ಸಮಾರಂಭದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರ ಕಛೇರಿ ವಿದ್ಯಾಧಿಕಾರಿಗಳಾದ ಶ್ರೀ ಎನ್.ಎಂ. ರಮೇಶ್, ಶ್ರೀ ಎಸ್.ಕೆ.ಬಿ. ಪ್ರಸಾದ್. ಹಿರಿಯೂರಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಂ. ರೇವಣ್ಣಸಿದ್ಧಪ್ಪ, ಚಿತ್ರದುರ್ಗದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಡಿ. ಹನುಮಂತರಾಯಪ್ಪ ಅವರುಗಳು ಅತಿಥಿಗಳಾಗಿ ಭಾಗವಹಿಸಿ ಚಳವಳಿಯ ಬೆಳವಣಿಗೆಗೆ ಎಲ್ಲಾ ನೆರವನ್ನು ನೀಡುವುದಾಗಿ ಭರವಸೆ ನೀಡಿದರು. ಶಿಬಿರದ ನಾಯಕರುಗಳಾಗಿ ಶ್ರೀ ಜಿ.ಎಸ್. ಚಂದ್ರಪ್ರಕಾಶ್, ಶ್ರೀ ಷರಾಪ್ ಮಾದಪ್ಪ, ಶ್ರಿ ಎಸ್.ಎಸ್. ಹುಸೇನಿ, ಸಿಸ್ಟರ್ ಸಿಂಥಿಯಾ, ಶ್ರೀ ಜಿ.ಎಂ. ವಾಮದೇವಪ್ಪ, ಶ್ರೀಮತಿ ನಿರ್ಮಲಾ ಕಲಾಶೆಟ್ಟಿ, ಶ್ರೀಮತಿ ಸಿ. ಮಂಜುಳಾ ನೇತೃತ್ವ ವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಅನ್ವರ್ ಭಾಷಾವಾರದ, ಜಂಟಿ ಕಾರ್ಯದರ್ಶಿ ಶ್ರೀಮತಿ ನಾಗರತ್ನ ತಿಪ್ಪೇಸ್ವಾಮಿ, ಸಹಾಯಕ ಕಾರ್ಯದರ್ಶಿ ಶ್ರೀಮತಿ ವೀಣಾ ಸ್ವಾಮಿ, ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಶ್ರೀನೂರುಲ್ಲಾ, ಹಿರಿಯ ಗೈಡರ್ ಶ್ರೀಮತಿ ಷರಫುನ್ನೀಸಾ ಶಿಬಿರದ ಯಶಸ್ಸಿಗೆ ಸಹಕರಿಸಿದರು. ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳಿಗೆ ಹೃತ್ಪೂರ್ವಕ ಅಭಿನಂದನೆಗಳು

ದಿನಾಂಕ 17–1–2009 ರಂದು ಬೆಂಗಳೂರು ಉತ್ತರ ಜಿಲ್ಲಾ ಸಂಸ್ಥೆಯವರು ಸೇಂಟ್‌ಜಾನ್ ಶಾಲೆಯ ಆಡಿಟೋರಿಯಂ ನಲ್ಲಿ ಏರ್ಪಡಿಸಿದ್ದ ಜಿಲ್ಲಾ ರ್‍ಯಾಲಿಯಲ್ಲಿ ಭಾಗವಹಿಸಿ ಶುಭ ಹಾರೈಸಿದ್ದೇನೆ. 600ಕ್ಕೂ ಮಿಕ್ಕ ಸ್ಕೌಟ್ಸ್–ಗೈಡ್ಸ್, ಕಬ್ಸ್–ಬುಲ್‌ಬುಲ್ಸ್, ರೋವರ್ ರೇಂಜರ್‌ಗಳು ಸ್ಕೌಟರ್–ಗೈಡರ್‌ಗಳು, ಹಾಗೂ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಪ್ರೇಮ್ ಕುಮಾರ್, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಕೆ. ಶೇಷಾದ್ರಿ, ಜಿಲ್ಲಾ ಗೈಡ್ಸ್ ತರಬೇತಿ ಆಯುಕ್ತೆ ಶ್ರೀಮತಿ ಬಿ. ರೇವತಿ, ಸಹಾಯಕ ಜಿಲ್ಲಾ ಆಯಕ್ತ ಶ್ರಿ ಪಾರ್ಥಸಾರಥಿ ಹಾಗೂ ಹಲವಾರು ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ರ್‍ಯಾಲಿಯಲ್ಲಿ ಭಾಗವಹಿಸಿ ಯಶಸ್ವಿಗೊಳಿಸಿದರು.

ದಿನಾಂಕ ಜನವರಿ 19ರಿಂದ 23ರ ವರೆವಿಗೆ ಒರಿಸ್ಸಾದ ಭುವನೇಶ್ವರದ ರಾಜ್ಯ ಕಾರ್ಯಾಲಯದ ಆವರಣದಲ್ಲಿ ಜರುಗಿದ 61ನೇ ರಾಜ್ಯ ವೃಕ್ಷಮಣಿದಾರಿಗಳ ಸಮಾವೇಶ ಯಶಸ್ವಿಯಾಗಿ ಜರುಗಿತು. ದಿನಾಂಕ 21 ರಂದು ನಾನು ಸಮಾವೇಶದಲ್ಲಿ ಭಾಗವಹಿಸಿ, ರಾಜ್ಯದ 28 ಜಿಲ್ಲೆಗಳಿಂದ ಬಂದಿದ್ದ 376 ವೃಕ್ಷಮಣಿದಾರಕರನ್ನು ಭೇಟಿಮಾಡಿ ಶುಭ ಹಾರೈಸಿದ್ದೇನೆ. ಚಳವಳಿಯ ಎರಡನೇ ಶತಮಾನದಲ್ಲಿ ನಾವುಗಳೆಲ್ಲರೂ ಪ್ರಮಾಣ ಮಾಡಿ ನಮ್ಮಗಳ ಕೈಲಾದಮಟ್ಟಿಗೆ ನಿಸ್ಪೃಹ ಮನದೊಂದಿಗೆ, ನನ್ನ ಕ್ಷೇತ್ರ ಹಾಗೂ ವಿಭಾಗದಲ್ಲಿ ಚಳವಳಿಯ ಆದರ್ಶಗಳನ್ನು ಹೆಚ್ಚಿಸುವಲ್ಲಿ ಪ್ರಾಮಾಣಿಕವಾದ ಪ್ರಯತ್ನ ಮಾಡಬೇಕೆಂದು ಎಲ್ಲರನ್ನು ಕೋರಿದ್ದೇನೆ. ಗೈಡ್ಸ್ ಜಂಟಿ ರಾಜ್ಯ ಕಾರ್ಯದರ್ಶಿ ಶ್ರೀಮತಿ ಬಿ.ವಿ. ರಾಮಲತಾ, ಹಿರಿಯ ತರಬೇತಿ ನಾಯಕಿ ಹಾಗೂ ಸ್ಥಾನಿಕ ಗೈಡ್ ಆಯುಕ್ತೆ ಶ್ರೀಮತಿ ಎಸ್.ಕೆ. ಪ್ರಭಾ ಹಾಗೂ ರಾಜ್ಯದ ವಿವಿದ ಭಾಗಗಳಿಂದ ಬಂದಿದ್ದ ತರಬೇತಿ ನಾಯಕರುಗಳು, ಸಹಾಯಕ ತರಬೇತಿ ನಾಯಕರುಗಳು, ವೃಕ್ಷಮಣಿಧಾರಕರು ಸಮಾವೇಶದ ಯಶಸ್ಸಿಗೆ ಸಹಕರಿಸಿದರು. ಹಿಂದಿನ ರಾಜ್ಯ ಕಾರ್ಯದರ್ಶಿಗಳೂ ಹಾಗೂ ಸಮಾವೇಶದ ಸಂಚಾಲಕರಾದ ಶ್ರಿ ಚಿನ್ನಸ್ವಾಮಿರೆಡ್ಡಿ

ಬಹಳ ಶ್ರಮವಹಿಸಿ ಸಮಾವೇಶದಲ್ಲಿ ಭಾಗವಹಿಸಿದವರೆಲ್ಲರಿಗೂ ಎಲ್ಲ ರೀತಿಯ ಅನುಕೂಲಗಳನ್ನು ಒದಗಿಸಿ 61ನೇ ರಾಜ್ಯ ಮಟ್ಟದ ಸಮಾವೇಶ ಯಶಸ್ವಿಗೊಳಿಸಿದರು. ಒರಿಸ್ಸಾದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೆ.ಪಿ. ಮಿಶ್ರ ಹಾಗೂ ರಾಜ್ಯ ಕಾರ್ಯದರ್ಶಿ ಶ್ರೀ ಆರ್.ಎಂ. ದೋರಾ ಹಾಗೂ ಎ.ಎಸ್.ಓ.ಸಿ. ಮತ್ತು ಪಿ.ಆರ್.ಓ. ಶ್ರೀಪಾಟ್ನಾಯಕ ಹಾಗೂ ಶ್ರೀ ಚಂದನ್‌ದಾಸ್ ಹಾಗೂ ಇತರ ಸಿಬ್ಬಂಧಿ ಸಮಾವೇಶದ ಯಶಸ್ಸಿಗೆ ಸಹಕರಿಸಿದರು. ಒರಿಸ್ಸಾ ರಾಜ್ಯ ಸಂಸ್ಥೆಗೆ ಹಾಗೂ ಸಮಾವೇಶದ ಯಶಸ್ಸಿಗೆ ಹಗಲಿರುಳೂ ಶ್ರಮಿಸಿದ ಶ್ರೀ ಚಿನ್ನಸ್ವಾಮಿರೆಡ್ಡಿ ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ದಿನಾಂಕ 23 ಜನವರಿ, 2009 ರಂದು ಬೆಂಗಳೂರು ಕನಕಪುರ ರಸ್ತೆ, ಕೋಣನಕುಂಟೆಯಲ್ಲಿರುವ ದೆಹಲಿ ಪಬ್ಲಿಕ್ ಶಾಲೆಯ ಸ್ಕೌಟ್-ಗೈಡ್ ಚಳವಳಿ ಘಟಕಗಳ ಉದ್ಘಾಟನೆಯಲ್ಲಿ ಭಾಗವಹಿಸಿದ್ದೆ. ಸಮಾರಂಭದಲ್ಲಿ ರಾಜ್ಯ ಕಾರ್ಯದರ್ಶಿ ಶ್ರೀ ಎಂ.ಎ. ಖಾಲಿದ್, ಸಂಸ್ಥೆಯ ನಿರ್ದೇಶಕರಾದ ಶ್ರೀಮನ್ನೂರ್ ಆಲಿಖಾನ್, ಪ್ರಿನ್ಸಿಪಾಲ್ ಶ್ರೀಮತಿ ಮಂಜುಶರ್ಮ, ಮುಖ್ಯ ಆಡಳಿತಾಧಿಕಾರಿ ಶ್ರೀ ಅತೀಖ್ ಅನ್ವರ್ ಹಿರಿಯ ಗೈಡ್ ಸಹೋದರಿ ಶ್ರೀಮತಿ ಮಲ್ಲಿಕಬಾನು, ಸ್ಕೌಟ್ ಮಾಸ್ಟರ್ ಶ್ರೀ ಕಿರಣ್ ಕುಮಾರ್, ಗೈಡರ್ ಶ್ರೀಮತಿ ಗೀತಾ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಪೋಷಕರುಗಳು ಭಾಗವಹಿಸಿ ಸಮಾರಂಭವನ್ನು ಯಶಸ್ವಿಗೊಳಿಸಿದರು. ಶಾಲೆಯ ಮಕ್ಕಳಿಂದ ನೃತ್ಯಪ್ರದರ್ಶನ ಹಾಗೂ ಸ್ಕೌಟ್-ಗೈಡ್‌ಗಳು ನೀಡಿದ ಚಳವಳಿಯ ಆಶಯ ಚಿಂತನೆಗಳು ಎಲ್ಲರ ಹೃದಯಮುಟ್ಟಿತು.

ನಾನು ಮತ್ತು ರಾಜ್ಯ ಕಾರ್ಯದರ್ಶಿಗಳ ಶಾಲೆಯ ಸಂಸ್ಥಾಪಕರೂ ಹಾಗೂ ರಾಜ್ಯಸಭೆಯ ಉಪಸಭಾಪತಿಗಳಾದ ಗೌರವಾನ್ವಿತ ಶ್ರೀ ಕೆ. ರೆಹಮಾನ್ ಖಾನ್ ರವರಿಗೆ ಹಾಗೂ ನಿರ್ದೇಶಕರುಗಳಿಗೆ, ಪ್ರಾಂಶುಪಾಲರಿಗೆ ಹಾಗು ಶ್ರೀಮತಿ ಮಲ್ಲಿಕಾಬಾನು ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದ ಹಾಗು ಅಭಿನಂದನೆಗಳನ್ನು ಸಲ್ಲಿಸಿದ್ದೇವೆ.

ದಿನಾಂಕ 24 ಜನವರಿ, 2009 ರಂದು ಹೊಸಪೇಟೆ ತುಂಗಭದ್ರಾ ಅಣೆಕಟ್ಟು ಆವರಣದಲ್ಲಿ ಜರುಗಿದ ರಾಜ್ಯ ಮಟ್ಟದ ಪೆಟ್ರೋಲ್ ನಾಯಕರ ಜಾಂಬೊರೇಟ್ ಉದ್ಘಾಟನೆಯಲ್ಲಿ ಭಾಗವಹಿಸಿದ್ದೆ. ಬಳ್ಳಾರಿ ಜಿಲ್ಲಾಧಿಕಾರಿ ಶ್ರೀ ಬಿ. ಶಿವಪ್ಪ, ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರಾದ ಡಾ. ಹೆಚ್. ಬಾಲರಾಜ್, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಎಲ್.ಡಿ. ಜೋಷಿ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಆರ್. ವೆಂಕಣ್ಣ, ಜಿಲ್ಲಾ ಸ್ಕೌಟ್ ಆಯುಕ್ತ ಡಾ.ಟಿ. ರಾಮನಾಥ್ ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಎ. ಶಖೀಬ್, ಧಾರವಾಡ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎಂ. ಲೋಂಡೆ, ಶ್ರೀಮತಿ ಪ್ರಭಾಲೋಂಡೆ, ರಾಜ್ಯ ಸ್ಥಾನಿಕ ಆಯುಕ್ತ ಶ್ರೀ ಎಂ.ಎ. ಚೆಲ್ಲಯ್ಯ, ಶ್ರೀಮತಿ ಜಾನಕಿ ವೇಣುಗೋಪಾಲ್ ಶ್ರೀಮತಿ ಬಿ.ರೇವತಿ, ಸಹಾಯಕ ರಾಜ್ಯ ಸಂಘಟನಾಧಿಕಾರಿಗಳಾದ ಶ್ರೀ ಟಿ.ಎ. ಮಂಜುನಾಥಚಾರ್ ಶ್ರೀ ಎಂ. ಪ್ರಭಾಕರಭಟ್, ಶ್ರೀ ಓಮೇಶ್ವರಯ್ಯ ಹಾಗೂ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಮಹಬೂಬ್ ಭಾಷಾ ಅವರುಗಳು ಹಾಗೂ ಜಿಲ್ಲಾ ಸಂಸ್ಥೆ, ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಜಾಂಬೋರೇಟ್‌ನ ಯಶಸ್ಸಿಗೆ ಸಂಪೂರ್ಣವಾಗಿ ಸಹಕರಿಸಿದರು. ರಾಜ್ಯದ 18 ಜಿಲ್ಲೆಗಳಿಂದ ಜಾಂಬೋರೇಟ್‌ನಲ್ಲಿ 670 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ದಳಗಳ ನಾಯಕ-ನಾಯಕಿಯರು ಜಾಂಬೋರೇಟ್‌ನಲ್ಲಿ ಭಾಗವಹಿಸಿದ್ದರು.

ಜಿಲ್ಲಾಧಿಕಾರಿ ಶ್ರೀ ಬಿ. ಶಿವಪ್ಪನವರು ಜಿಲ್ಲಾ ಸಂಸ್ಥೆಗೆ ತರಬೇತಿ ಶಿಬಿರ ನಿರ್ಮಿಸಲು ಸೂಕ್ತ ಸ್ಥಳ ಒದಗಿಸುವುದಾಗಿ ಭರವಸೆ ನೀಡಿದರು. ಜಿಲ್ಲಾ ಉಪನಿರ್ದೇಶಕರಾದ ಶ್ರೀ ಹೆಚ್. ಬಾಲರಾಜ್ ಅವರು ಜಿಲ್ಲೆಯಲ್ಲಿ ಚಳವಳಿ ಹೆಚ್ಚಿಸಲು ಎಲ್ಲ ನೆರವು ನೀಡುವುದಾಗಿ ಆಶ್ವಾಸನೆ ನೀಡಿದರು. ಜಾಂಬೋರೇಟ್ ಯಶಸ್ವಿಯಾಗಿ ಜರುಗಲು ಸಂಪೂರ್ಣವಾಗಿ ತೊಡಗಿಸಿಕೊಂಡ ಜಿಲ್ಲಾ ಮುಖ್ಯ ಆಯುಕ್ತರೂ ಹಾಗೂ ಹಿರಿಯ ತರಬೇತಿ ನಾಯಕರಾದ ಶ್ರೀ ಆರ್. ವೆಂಕಣ್ಣನವರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ತಮ್ಮ ವಿಶ್ವಾಸಿ

ಸ್ಕೌಟ್-ಗೈಡ್ ವಂದನೆಗಳೊಂದಿಗೆ,

**ಕೊಂಡಜ್ಜಿ ಬ. ಷಣ್ಮುಖಪ್ಪ**

# ಚಿಂತೆ

- ಗೊ.ರು. ಚನ್ನಬಸಪ್ಪ

'ಚಿಂತೆಯಿಲ್ಲದವನಿಗೆ ಸಂತೆಯಲ್ಲಿ ನಿದ್ದೆ ಬಂತು' ಎಂಬ ಒಂದು ಗಾದೆಯ ಮಾತಿದೆ. ಎಂದರೆ ಚಿಂತೆ ಇದ್ದರೆ ನಿದ್ದೆ ಬಾರದು ಎಂದರ್ಥ. ನಿದ್ದೆಗೆಟ್ಟರೆ ನೆಮ್ಮದಿಗೂ ಭಂಗ.

ಚಿಂತೆ ಎಂದರೆ ಮಾನಸಿಕ ಕಳವಳ. ಯೋಚನೆ, ಮನಸ್ಸಿಗಾದ ನೋವು, ದುಃಖ, ನಿರಾಸೆ, ಹತಾಶೆಗಳೇ ಚಿಂತೆಯ ಒಲೆಗೆ ಇಂಧನವಾಗುತ್ತವೆ. ಇಂಧನವಿದ್ದ ಒಲೆ ಉರಿಯಲು ಬಂಧನವಿರುವುದಿಲ್ಲ.

ಚಿಂತೆ ಕಾರಣವಿಲ್ಲದೆ ಉಂಟಾಗುವುದಿಲ್ಲ. ಅಪೇಕ್ಷೆ ಈಡೇರದಿದ್ದಾಗ, ನಿರೀಕ್ಷೆ ವಿಫಲವಾದಾಗ, ಆಸೆ ಅತಿಯಾದಾಗ, ಅಸೂಯೆ ತಲೆದೋರಿದಾಗ, ಆರೋಗ್ಯ ಹದಗೆಟ್ಟಾಗ, ಅನ್ಯರಿಂದ ಅವಮಾನಗೊಂಡಾಗ, ಉಡಲು-ಉಣ್ಣಲು ಕೊರತೆಯಾದಾಗ, ಸ್ಪರ್ಧೆಯಲ್ಲಿ ಸೋತಾಗ, ಉದ್ಯಮದಲ್ಲಿ ನಷ್ಟವಾದಾಗ,ಸ ಮನ್ನಣೆ ದೊರೆಯದಿದ್ದಾಗ, ಸಂಶಯ-ಹೆದರಿಕೆಗಳು ಇದ್ದಾಗ, ಅವಕಾಶ ವಂಚನೆ ಆದಾಗ, ಸ್ಥಾನ-ಮಾನ ಸಿಕ್ಕದಿದ್ದಾಗ, ಮೋಸಕ್ಕೆ ಬಲಿಯಾದಾಗ, ವಿಶ್ವಾಸ ದ್ರೋಹಕ್ಕೆ ಒಳಗಾದಾಗ ಮನಸ್ಸು ವ್ಯಾಕುಲಗೊಳ್ಳುತ್ತದೆ. ಅದೇ ಚಿಂತೆ.

ಚಿಂತೆ ಒಂದು ರೀತಿಯ ಅಂಟು, ಅದು ಒಮ್ಮೆ ನಮ್ಮ ಮನಸ್ಸಿಗೆ ಅಂಟಿಕೊಂಡರೆ ಅದನ್ನು ಬಿಡಿಸುವುದು ಕಷ್ಟ. ಚಿಂತೆ ಮನಸ್ಸನ್ನು ಮುದುಡಿಬಿಡುತ್ತದೆ. ಒಂದು ರೀತಿಯ ಅನಾಥಪ್ರಜ್ಞೆ ಉಂಟುಮಾಡುತ್ತದೆ. ಮನಸ್ಸು ಗಾಳಿಗೆ ಸಿಕ್ಕ ತರಗೆಲೆಯಂತೆ ಲಿವಿ ಲಿವಿ ಒದ್ದಾಡುವುದೂ ಉಂಟು. ಹಾಗಾಗಿ ನಿದ್ದೆಯೂ ಬಾರದು; ಊಟವೂ ಸೇರದು. ಪರಿಣಾಮವಾಗಿ ದೇಹ ಬಳಲುತ್ತದೆ. ಬಳಲಿದ ದೇಹ ಸುಲಭವಾಗಿ ರೋಗ-ರುಜಿನಗಳಿಗೆ ತುತ್ತಾಗುತ್ತದೆ: ಚಿಂತೆಯ ಹುತ್ತವೇ ಆಗಿಬಿಡುತ್ತದೆ.

ಚಿಂತೆ ಎರಡು ಬಗೆಯಲ್ಲಿ ಕಾಡುತ್ತದೆ. ಒಂದು ಮಾನಸಿಕ ವ್ಯಥೆ; ಮತ್ತೊಂದು ದೈಹಿಕ ಬಾಧೆ. ಚಿಂತೆಯಲ್ಲಿ ಕೆಲವು ವೈಯಕ್ತಿಕ, ಕೆಲವು ಕೌಟುಂಬಿಕ, ಕೆಲವು ಸಾಮಾಜಿಕ ಮತ್ತೆ ಕೆಲವು ಜಾಗತಿಕ. ಯಾವುದೇ ಇರಲಿ, ಅದು ನಮ್ಮೊಳಗೆ ಸೇರದಂತೆ ನೋಡಿಕೊಳ್ಳುವುದೇ ಕ್ಷೇಮಕರ. ಅದು ರೋಗಗಳಲ್ಲೆಲ್ಲಾ ದೊಡ್ಡ ರೋಗ. ಅದು ಹೊರಗಿನ ಯಾವ ಚಿಕಿತ್ಸೆಯಿಂದಲೂ ಗುಣವಾಗುವಂತಹುದಲ್ಲ. ಚಿಂತೆ ಅತಿಯಾದಾಗ ವ್ಯಕ್ತಿ ಮತಿಗೆಡುತ್ತಾನೆ; ವಿವೇಕವನ್ನೇ ಕಳೆದುಕೊಂಡುಬಿಡುತ್ತಾನೆ.

ಚಿಂತೆಯ ಸ್ವಭಾವ ಸ್ವರೂಪ ಒಂದೇ ಆದರೂ ಒಬ್ಬೊಬ್ಬರಿಗೆ ಒಂದೊಂದು ಚಿಂತೆ. ಗಂಡ -ಹೆಂಡಿರಲ್ಲಿ ಹೊಂದಾಣಿಕೆಯಿಲ್ಲದಿದ್ದರೆ ಚಿಂತೆ, ಮಕ್ಕಳು ಒಳ್ಳೆಯವರಾಗದಿದ್ದರೆ ಚಿಂತೆ, ರಾಜಕೀಯ ಕ್ಷೇತ್ರದಲ್ಲಿ ಅಧಿಕಾರ ದೊರೆಯದಿದ್ದರೆ ಚಿಂತೆ, ತಾನು ಬರೆದ ಸಾಹಿತ್ಯ ಕೃತಿಗೆ ಮನ್ನಣೆ ದೊರಕದಿದ್ದರೆ ಚಿಂತೆ, ಗಿರಾಕಿಗಳಿಲ್ಲದಾಗ

ವ್ಯಾಪಾರಿಗೆ ಚಿಂತೆ, ಕೆಲವರಿಗೆ ಆಸ್ತಿಯ ಚಿಂತೆ, ಕೆಲವರಿಗೆ ಹೊನ್ನು-ಮಣ್ಣುಗಳ ಚಿಂತೆ, ಗಂಡಿಗೆ ಹೆಣ್ಣಿನ ಚಿಂತೆ, ಹೆಣ್ಣಿಗೆ ಗಂಡಿನ ಚಿಂತೆ, ಕೆಲವರಿಗೆ ಬದುಕುವ ಚಿಂತೆ, ಕೆಲವರಿಗೆ ಸಾಯುವ ಚಿಂತೆ, ಒಟ್ಟಾರೆ ಬಹುತೇಕ ಜನ ಚಿಂತೆಯ ಕಂತೆಯನ್ನು ಕಟ್ಟಿಕೊಂಡೇ ಇರುತ್ತಾರೆ.

'ಚಿಕಿತ್ಸೆಗಿಂತ ಮುನ್ನೆಚ್ಚರಿಕೆ ಲೇಸು' ಎಂದು ಹೇಳುವುದುಂಟು. ಅಂತೇ ನಾನು ಮೊದಲೇ ಹೇಳಿದಂತೆ ಚಿಂತೆಗೆ ಅವಕಾಶ ಕೊಡದಿರುವುದೇ ಶ್ರೇಷ್ಠಮಾರ್ಗ. ಮಾಗಿದ ಮನಸ್ಸು ಹೇಗೆ ಚಿಂತೆ. ಬರದಂತೆ ನೋಡಿಕೊಳ್ಳುತ್ತದೆ. ಎನ್ನುವುದಕ್ಕೆ ನಮ್ಮ ಜನಪದ ಪ್ರಸಂಗವೊಂದಿದೆ.

ತುಂಬ ಅನ್ಯೋನ್ಯವಾಗಿದ್ದ ಒಂದು ದಾಂಪತ್ಯ ಜೀವನ. ಅದು ಒಬ್ಬಾಕೆಗೆ ಸಹನೆಯಾಗಲಿಲ್ಲ. ಹೇಗಾದರೂ ಆ ತಿಳಿಗೊಳದಲ್ಲಿ ಕೆಸರೆಬ್ಬಿಸಬೇಕೆಂಬ ಹುಚ್ಚು ಅವಳದು. ಒಂದು ದಿನ ಮೆಲ್ಲಗೆ ಒಂದು ವಿಷದ ಬಾಣ ಬಿಡುತ್ತಾಳೆ.

'ಚಿಂತಾಕು ಇಟಗೊಂಡು, ಚಿಪ್ಪಾಟಿ ಬಳಿವಾಕಿ, ಚಿಂತಿಲ್ಲವೇನು ನಿನಗೀಟು, ಚಿಂತಿಲ್ಲವೇನು ನಿನಗೀಟು – ನಿನಗಂಡ, ಅಲ್ಲೊಬ್ಬ ಕೂಡ ನಗುತ್ತಿದ್ದ' ಎಂದುಬಿಟ್ಟಳು. ಆದರೆ, ಆ ಮಾಗಿದ ಮನದ ಗರತಿ ಕೊಡುವ ಉತ್ತರ ಕೇಳಿ : 'ನಕ್ಕರೆ ನಗಲೇಳು, ನಗೆಮುಖದ ಕ್ಯಾದಿಗಿ, ನಾ ಮುಚ್ಚಿ ಮುಡಿವ ಪರಿಮಳವ – ಗೆಳತ್ಯಮ್ಮ, ಅವಳೊಂದು ಗಳಿಗೆ ಮುಡಿಲೇಳು'.

ಒಂದು ವೇಳೆ ಆ ವಿಷಗಂಟಿಯ ಮಾತನ್ನು ಈ ಗರತಿ ಹಚ್ಚಿಕೊಂಡಿದ್ದರೆ ಚಿಂತೆಯ ಮಡುವಿಗೇ ಬೀಳಬೇಕಾಗಿತ್ತು. ಆದರೆ ಅವಳು ಎಚ್ಚರ ವಹಿಸುತ್ತಾಳೆ.

**ಗಮನಿಸಿ !!! ಗಮನಿಸಿ !!! ಗಮನಿಸಿ !!!**

**ಸ್ಕೌಟ್ಸ್, ಗೈಡ್ಸ್ ಮತ್ತು ದಳ ನಾಯಕರುಗಳೇ**

**ಫೆಬ್ರವರಿ 01, 2009ರಂದು ಪೋಲಿಯೊ ಲಸಿಕೆ ಹಾಕುವ ಕಾರ್ಯಕ್ರಮದಲ್ಲಿ**
**ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿರಿ!!**
**ಸಾರ್ವಜನಿಕರಿಗೆ ಸಹಕರಿಸಿರಿ!!!**
**5 ವರ್ಷದೊಳಗಿನ ಮಗುವಿಗೆ ಪೋಲಿಯೊ ಹನಿಯನ್ನು ತಪ್ಪದೇ ಕೊಡಿಸಿ**

**ಜೀವನಕ್ಕಾಗಿ ಎರಡು ಹನಿಗಳು**

ಪ್ರತಿಯೊಂದು ಮಗುವಿಗೂ ಪೋಲಿಯೊ ಹನಿ ಹಾಕೋಣ
ರಾಷ್ಟ್ರವನ್ನು ಪೋಲಿಯೊದಿಂದ ಮುಕ್ತಗೊಳಿಸೋಣ

– ರಾಜ್ಯ ಕಾರ್ಯದರ್ಶಿ

# ಸ್ಕೌಟ್ ಕೌಶಲ್ಯ

## ಶಿಬಿರಾಗ್ನಿ ಉದಂತ ಸಂ – 4

# ಸ್ಕೌಟ್ ಪೆಟ್ರೋಲು

...............ಹಿಂದಿನ ಸಂಚಿಕೆಯಿಂದ

## ಅರಣ್ಯ ಕೌಶಲ್ಯದ ಮಾರ್ಗಶೋಧನೆಯ ಕುರುಹುಗಳು

ಸ್ಕೌಟುಗಳ ಮಾರ್ಗ ಶೋಧನೆಯ ಕುರುಹುಗಳನ್ನು ರಸ್ತೆಯ ಬಲಬದಿಯಲ್ಲಿ, ನೆಲದ ಮೇಲೆ ಗುರುತಿಸಲಾಗುತ್ತದೆ. ಖಾಸಗಿ ಆಸ್ತಿಗೆ ಯಾವುದೇ ರೀತಿಯ ಹಾನಿಯುಂಟಾಗುವ ಅಥವಾ ವಿಕಾರಗೊಳ್ಳುವ ರೀತಿಯಲ್ಲಿ ಈ ಕುರುಹುಗಳನ್ನು ಹಾಕಬಾರದು



ಈ ಮಾರ್ಗವನ್ನನುಸರಿಸಿ.




ಮೂರು ಹೆಜ್ಜೆ ದೂರದಲ್ಲಿ, ಶರ ಚಿಹ್ನೆಯು ತೋರುವ ದಿಕ್ಕಿನಲ್ಲಿ ಪತ್ರವನ್ನು ಇಡಲಾಗಿದೆ.



ಈ ಮಾರ್ಗವನ್ನನುಸರಿಸಬಾರದು.



ನಾನು ಮನೆಗೆ ಹೋಗಿದ್ದೇನೆ.




ಪೆಟ್ರೋಲ್ ನಾಯಕ ಕಾಗೆ ಪೆಟ್ರೋಲು

2ನೇ ಮೈಸೂರು ದಳ

ಗುರುತು ಹಾಕಿದ ಮರ



ಕಲ್ಲುಗಳು



ಪೊದೆಗಳು



ಹುಲ್ಲು



ಗುರುತು



ಈ ಗುರುತುಗಳು ಬಲಗಡೆ ತಿರುಗಲು ಸೂಚಿಸುತ್ತವೆ

ಗುರುತು ಹಾಕಿದ ಮರ



ಕಲ್ಲುಗಳು



ಪೊದೆಗಳು



ಹುಲ್ಲು



ಗುರುತು



ನೀರಿಗೆ ದಾರಿ

ಇತರರ ತಿಳುವಳಿಕೆಗಾಗಿ ಸ್ಕೌಟಾದವನು, ನೆಲದ ಮೇಲೆ ಕುರುಹುಗಳನ್ನು ಹಾಕಿದಾಗ ತನ್ನ ಪೆಟ್ರೋಲ್ ಪ್ರಾಣಿಯ ತಲೆಯನ್ನು ಗುರುತಿಸುತ್ತಾನೆ. ಯಾವುದಾದರೊಂದು ಮಾರ್ಗವನ್ನು ಅನುಸರಿಸಬಾರದೆಂದು ಹೇಳುವಾಗ, ಆ ಕುರುಹಿನ ಜೊತೆಗೆ, ತನ್ನ ಪೆಟ್ರೋಲು ಪ್ರಾಣಿಯ ತಲೆಯನ್ನು ಗುರುತಿಸುತ್ತಾನೆ. ಇದರಿಂದ ಯಾವ ಪೆಟ್ರೋಲ್‌ನವರು ಅದು ಸರಿಯಾದ ಮಾರ್ಗವಲ್ಲವೆಂದು ಕಂಡುಕೊಂಡರು ಎಂದು ತಿಳಿಯುತ್ತದೆ. ಆ ತಲೆಯ ಗುರುತಿನೊಂದಿಗೆ ಆ ಸ್ಕೌಟು ಪೆಟ್ರೋಲ್‌ನಲ್ಲಿ ತನ್ನ ಸಂಖ್ಯೆಯನ್ನೂ ಗುರುತಿಸಿದ್ದರೆ ಅದನ್ನು ಕಂಡುಕೊಂಡ ಸ್ಕೌಟ್‌ನ ಹೆಸರನ್ನೂ ಹೇಳಬಹುದು.

ರಾತ್ರಿಯ ವೇಳೆಯಲ್ಲಿ ಕಡ್ಡಿಗಳಿಗೆ ಹುಲ್ಲನ್ನು ಕಟ್ಟುವುದರಿಂದಲಾಗಲಿ, ಅಥವಾ ಒಂದೇ ರೀತಿಯಲ್ಲಿ ಕಲ್ಲುಗಳನ್ನು ಜೋಡಿಸುವುದರಿಂದಾಗಲೀ, ಕೈಗಳಿಂದ ಮುಟ್ಟಿನೋಡಿ ಕುರುಹುಗಳನ್ನು ತಿಳಿಯಲು ಸಹಾಯವಾಗುತ್ತದೆ.

(ಮುಂದುವರೆಯುತ್ತದೆ)



## ಶ್ರದ್ಧಾಂಜಲಿ

ದಿ॥ ಎಂ. ಪ್ರಸನ್ನಕುಮಾರ್ ರೋವರ್ ಲೀಡರ್ ಹಾಗೂ ಸಹ ಕಾರ್ಯದರ್ಶಿ, ಜಿಲ್ಲಾ ಸಂಸ್ಥೆ ದಾವಣಗೆರೆ ಇವರು ದಿನಾಂಕ 10-12-2008 ರಂದು ದೈವಾದೀನರಾಗಿರುತ್ತಾರೆ ಎಂದು ತಿಳಿಸಲು ವಿಷಾಧಿಸುತ್ತೇವೆ. ಅವರ ಕುಟುಂಬ ವರ್ಗಕ್ಕೆ ಅವರ ಅಗಲಿಕೆಯನ್ನು ಸಹಿಸುವ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ

# ಸ್ಕೌಟ್ ಸಂಸ್ಥೆಗೆ ಸಂದ ಗೌರವ

– ರಾ. ಚಂದ್ರಶೇಖರನ್, ಎಲ್.ಟಿ. (ಕಬ್)

[1931ರ ನವೆಂಬರ್‌ನಲ್ಲಿ, ಕೇಂಬ್ರಿಡ್ಜ್ ವಿಶ್ವವಿದ್ಯಾಲಯವು ಬಿ.ಪಿ. ರವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿತು. ತಾವು ಸ್ವೀಕರಿಸಿದ ಆ ಪದವಿ ಹಾಗೂ ಸಮಾರಂಭದ ಬಗ್ಗೆ ತಮ್ಮದೇ ಆದ ವಿಶೇಷ ಶೈಲಿಯಲ್ಲಿ ಬಿ.ಪಿ. ವಿವರಿಸಿದ್ದಾರೆ. ಆಪದವಿಯು ತಮಗೆ ಸಂದ ಗೌರವಕ್ಕಿಂತಲೂ, ಸಂಸ್ಥೆಯ ಕಾರ್ಯಕಲಾಪಗಳಿಗೆ ನೀಡಿದ ಮಾನ್ಯತೆಯೆಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.]

"ಹೋದ ತಿಂಗಳು, ಕೇಂಬ್ರಿಡ್ಜ್ ವಿಶ್ವವಿ ದ್ಯಾಲಯದ ಉಪಕುಲಪತಿಗಳಿಂದ ನನಗೊಂದು ಪತ್ರವು ಬಂದಿತು. ಅದರಲ್ಲಿ ವಿ.ವಿ. ಆಡಳಿತ ಮಂಡಲಿಯು ನನಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಲು ನಿರ್ಧರಿಸಿರುವುದಾಗಿ ತಿಳಿಸಿದ್ದರು. ನಾನು ಅದನ್ನು ಸ್ವೀಕರಿಸಬೇಕಾಗಿ ಕೋರಿ ಆಹ್ವಾನ ನೀಡಿದ್ದರು. ಆ ಕಾರಣ ನಾನಲ್ಲಿಗೆ ಹೋಗಿದ್ದೆ.

ಅದೊಂದು ಶುಭ ಸಂಜೆಯ ಸತ್ಕಾರ ಕೂಟವಾಗಿದ್ದಿತು. 230 ಜನ ರೋವರ್ ಸ್ಕೌಟುಗಳು ಹಾಜರಿದ್ದ ಆ ಸಮಾರಂಭದಲ್ಲಿ ನಾನು ಭಾಗವಹಸಿಬೇಕಾಯಿತು. ಅದರಿಂದ ನನಗೆ ವಿ.ವಿ. ದ ರೋವರ್‌ಗಳ ಪರಿಣಾಮಕಾರೀ ಭ್ರಾತೃತ್ವದ ಪರಿಚಯ ಆಯಿತು. ಅವರ ನಲಿವು, ಉತ್ಸುಕತೆಗಳ ಸಾಹಚರ್ಯವು ದೊರಕಿತು. ಜೊತೆಗೆ ಸೊಗಸಾದ, ಭರ್ಜರಿ ಊಟವೂ ಆಯಿತು. ಭೋಜನಾನಂತರ, ನಾನು ಹೇಳಲೇಬೇಕಾದ ಒಂದೆರಡು ಮಾಮೂಲೀ ಮಾತುಗಳೂ ಮುಗಿಯಿತು. ಆಗಿಂದಾಗಲೇ "ಪದವಿಪ್ರದಾನ ಸಮಾರಂಭ"ವೂ ಇರುವುದಾಗಿ ತಿಳಿಯಿತು. ನನಗೆ ಆಶ್ಚರ್ಯವೆನಿಸಿತು.

ಅದೊಂದು ಭಾವನಾತ್ಮಕವೂ, ಪ್ರಭಾವಶಾಲಿಯೂ ಆದ ಸಮಾರಂಭವಾಗಿದ್ದಿತು.

ಉತ್ಕೃಷ್ಟವಾದ ಟಸ್ಸೋರ್ ಕಿಮೋನಾ ಬಟ್ಟೆಯಿಂದ ತಯಾರಾದ ಗೌನನ್ನು ನನಗೆ ಕೊಟ್ಟರು. ನಾನದನ್ನು ಧರಿಸಿದೆ. ಅದರ ಜೊತೆಗೊಂದು ಹ್ಯಾಟ್ ಕೊಟ್ಟರು. ಅದು ಸ್ಕೌಟ್ ಹ್ಯಾಟ್ ನಂತೆಯೇ ಇತ್ತು. ಆದರೆ ಬಣ್ಣ ಮಾತ್ರ ರಾಜಯೋಗ್ಯ ಕಡುಗೆಂಪು. ಅದನ್ನು ಅಳತೆ ಮೀರಿದ ದಪ್ಪವೃಕ್ಷಮಣಿಗಳಿಂದ ಅಲಂಕರಿಸಲಾಗಿತ್ತು. ಆಡಂಬರದ ಸಂಜೆವಸ್ತ್ರ, ಕೋಟು ಮತ್ತು ಎತ್ತರವಾದ ಹ್ಯಾಟ್ ಧರಿಸಿದ್ದ, ಕೈಗಳಲ್ಲಿ ದೊಡ್ಡಗದೆಯನ್ನು ಹಿಡಿದ ಇಬ್ಬರು ವಿ.ವಿ. ಅಧಿಕಾರಿಗಳು, ಗೋಳಾಕಾರದ ಭೂಮಂಡಲ ಚಿತ್ರದ ಮೇಲೆ "ಬಿ.ಪಿ. ಸ್ಪಿರಿಟ್" ಎಂದು ಎದ್ದು ಕಾಣುವಂತೆ ಬರೆದಿದ್ದ ನಿಶಾನೆಯನ್ನು ಪ್ರದರ್ಶಿಸುತ್ತಾ ಮುನ್ನಡೆದರು. ಅವರ ಮಧ್ಯೆ ನಾವು. [ದೃಶ್ಯವು ಪೆಟ್ರೋಲ್ ಪಂಪ್ ಹೋಲುತ್ತಿತ್ತು.] ಉಪಕುಪತಿಗಳಾದ ರೇ॥ ಗ್ರೆಸ್ ಫರ್ಡ್ ಜೋನ್ಸ್‌ರವರು, ನಾನು ಧರಿಸಿದ್ದ ತರಹದ ಗೌನು ಧರಿಸಿದ್ದರು. ಆದರೆ ಅವರನ್ನು ಅಷ್ಟು ಸುಲಭವಾಗಿ ಹೇಳುವಂತಿರಲಿಲ್ಲ. ಏಕೆಂದರೆ ಅವರು ಬೀವರ್ ಪ್ರಾಣಿಗಿರುವಂತೆ. ಕರಿಯ ಕುಚ್ಚು ಕುಚ್ಚಾದ ಗಡ್ಡವನ್ನು ಬೆಳೆಸಿಕೊಂಡಿದ್ದರು.

ಈಗ ಸಾರ್ವಜನಿಕ ವಾಗ್ಮಿಯೊಬ್ಬರು ನನ್ನನ್ನು ಕಲಾತ್ಮಕವಾದ ಲ್ಯಾಟಿನ್ ಭಾಷೆಯಲ್ಲಿ ಪರಿಚಯ ಮಾಡಿಕೊಟ್ಟರು. ಅವರ ವಾಕ್ಚಾತುರ್ಯ ಹಾಗೂ ಹೊಗಳಿಕೆಯ ಮಾತುಗಳಿಂದ ನನಗೆ ಒಂದು ರೀತಿಯ ಮುಜುಗರವಾಯಿತು. ಗೂಳಿಯು ಬೆವರುವಂತೆ (ನಾನದನ್ನು ನೋಡಿಲ್ಲವೆನ್ನಿ) ನಾನು ಒಳಗಿನಿಂದ ಭಾವನಾತ್ಮಕವಾಗಿ ಬೆವರಿದೆ.

ಅವರು ಹೀಗೆ ಪರಿಚಯಿಸಿದರು :–

"ಓಯೆಜ್, ಓಯೆಜ್, ಓಯೆಜ್, ಓ....ಯೀ
ಓ ಬೇಡನ್ ಪೊವೆಲ್ ಗಿಲ್ ವೆಲೆನ್ಸಿಸ್ ಎಟ್ ವೋಸ್ ಮಾಜಿಸ್ಟರ್
ಸ್ಕಾಟೋರಂ ಎಟ್ ವೋಸ್ ಓ ರೋವರಿ ಎಕ್ಸ್‌ಪ್ಲೋರೇಟೋರಿಸ್
ಬಲ್ ಬಸ್ ಮುರು ಈಡಿಫಿ ಕ್ಯಾವಿಟ್"

ಮುಂದುವರೆಸಿ, ಕವಿಯೊಬ್ಬನು ಅಭಿನಂದಿಸುವ ರೀತಿಯಲ್ಲಿ

"ಸಾನಾಟೋಜನ್, ರಾಡಾಕ್ಸ್ ಎಲ್ಲಿ ಮಾನ್ಸ್ ಎಂಬ್ರೋಕೇಷನ್ ಫಾರ್ ಬ್ರುಯಿಸಸ್,
ಕೋಲಿನಾಸ್ ವೀಟ್ ವೇಪೆಕ್ಸ್ ವಿಟಾ ಫ್ಹಿಟ್ ವೆರಿಕೋಸ್ ವೆಯ್‌ನ್ಸ್

ಕ್ಯಾಸ್ಕರಾ ಸಗ್ರಡ ಥ್ಹಾಕ್ಸ್ ಈನೋಸ್ ಜ್ಹಾಂಬುಕ್ ರೈವಿಟಾ
ಪೆಪ್ಸೋಡೆಂಟ್ ಯೂತಿ ಮಾಲ್ ಎಲ್ಲಿ ಮಾನ್ಸ್ ಆಲ್ಲೋಫಾರ್ ಸ್ರೈನ್ಸ್"

ಪ್ರಸ್ತುತಕ್ಕೆ ಬರೋಣ. ನಮ್ಮ ಇಂದಿನ ಅತಿಥಿಯ ಬಗ್ಗೆ ಭವಿಷ್ಯ ನುಡಿದಿತ್ತು. ಫೆನ್ ಡಿಟ್ಟನ್ ಬಳಿಯ ಜೌಗಿನಲ್ಲಿ ಅದು ಕೇಳಿಬಂದಿತ್ತು. ಕೆಲವು ದಿನಗಳ ಹಿಂದೆ, ಕೇಂಬ್ರಿಡ್ಜ್‌ಗೆ ಸೆಂಟ್ ಮೈಖೇಲ್‌ರವರು, ಮಾರ್ಕೆಟ್ಹಿಲ್ ಬಳಿ ನಡೆದು ಬರುತ್ತಿದ್ದರು. ಅಲ್ಲಿ ಕೆಲವು ಎಳೆವಯಸ್ಸಿನ ತುಂಟ ಬಾಲಕರು ಗೋಲಿ ಆಟ ಆಡುತ್ತಿದ್ದರು. ಅದನ್ನವರು ನೋಡಿದ ಕೂಡಲೇ ಹೀಗೆಂದುಕೊಂಡರು. ಅದನ್ನು ಪಕ್ಕದಲ್ಲಿದ್ದವರು ಕೇಳಿಸಿಕೊಂಡರು. (ಅದು ವಿದೇಶಿ ಭಾಷೆಯಾಗಿತ್ತು.) "Unus diesses I hi pueri hebebunt non rolum or bolum but polum". ಅದು ಗ್ರೀಕ್ ಭಾಷೆ ಆಗಿದ್ದರೆ, ಸರಿ. ನಾನದನ್ನು ನಿಮಗಾಗಿ ಹೀಗೆ ಭಾಷಾಂತರಿಸುತ್ತೇನೆ. Unus dies ಮುಂದೊಂದು ದಿನ; ಅದರ ಮುಂದಿನ ಪದ Sas I ಇದು ಬಹಳ ಮಂದಿಗೆ ಒಗಟೇ ಸರಿ. ಆದರೆ ಅದನ್ನು ಹಳೆಯ ಇಂಗ್ಲಿಷ್‌ನಲ್ಲಿ ಪ್ರೊ॥ ಎಡ್ಗರ್ ವ್ಯಾಲೇಸ್‌ರವರು "ಮೀಥಿಂಕ್ಸ್" ಎಂದು ಅರ್ಥೈಸುತ್ತಾರೆ. ಎಂದರೆ "ನಾನೆಂದುಕೊಳ್ಳುತ್ತೇನೆ." ಅದೇ ಸರಿಯಾದ ಅರ್ಥವಿರಬೇಕು. ನಾವೂ ಹಾಗೇ ಅಂದುಕೊಳ್ಳೋಣ ಆಗ ಮುಂದೊಂದು ದಿನ. ನಾನೆಂದುಕೊಳ್ಳುತ್ತೇನೆ, ಈ ಪೋರರಿಗೆ, non rolum- ರೂಲ್ ದೊಣ್ಣೆ ಆಗಲಿ; non bolum - ಬರ್ಬ್ ಮರದ ರೆಂಬೆ ಆಗಲೀ (ಪ್ರಯೋಜನವಿಲ್ಲ) but Polum ಆದರೆ ಪೊವೆಲ್ (ಬರುತ್ತಾನೆ). ಅದು ಸರಿ, ನೋಡಿ ಆ ಭವಿಷ್ಯವು ಹೇಗೆ ನಿಜವಾಗಿದೆ! (ಇದು ನನ್ನ ಅಭಿಪ್ರಾಯ ಎನ್ನಿ).

ವಿಶ್ವದ ವಿದ್ಯಮಾನಗಳನ್ನು ವೀಕ್ಷಿಸೋಣ. ಪೂರ್ಣ ಅಲ್ಲದಿದ್ದರೂ ನೋಡುವಷ್ಟನ್ನು ಮನಸ್ಸಿಟ್ಟು ನೋಡೋಣ. ಎಲ್ಲೆಲ್ಲೂ ಈ ಭಾವನೆಯು (ಬಿ.ಪಿ.) ತುಂಬಿದೆ. ಅದು ಶಕ್ತಿಯುತವಾಗಿದೆ. ಬಲವತ್ತರವಾಗಿದೆ. ಈ ಕಂಗೆಟ್ಟ ವಿಶ್ವದಲ್ಲಿ ಭಾವನೆಯು (ಬಿ.ಪಿ.) ತುಂಬಿದೆ. ಅದು ಶಕ್ತಿಯುತವಾಗಿದೆ. ಬಲವತ್ತರವಾಗಿದೆ. ಈ ಕಂಗೆಟ್ಟ ವಿಶ್ವದಲ್ಲಿ ಅದು ಹೇಗೆ ಸಾಧ್ಯ ಎಂದು ನಮಗೆ ನಾವೇ ಕೇಳಿಕೊಂಡೆವು. ಎಲ್ಲಾ ನೇರ, ವಕ್ರರಸ್ತೆಗಳೂ ಒಂದೆ ಆಗಿದೆ. ಗುಡ್ಡ, ಬೆಟ್ಟಗಳ ಎತ್ತರ ಕುಗ್ಗಿದೆ. ಭಾರವಾದ ವಸ್ತುಗಳು ಹಗುರವಾಗಿವೆ. ಅದೃಷ್ಟವಂತರಲ್ಲದವರ ಕೈಹಿಡಿದು ನಡೆಸುವ ಶಕ್ತಿ ಇದಕ್ಕಿದೆ. ನೋಡು, ನೋಡುತ್ತಿದ್ದಂತೆ, ಈ ಶಕ್ತಿಯುತ ಭಾವನೆಯು ಜನಾಂಗಗಳು, ದೇಶಗಳು ಬಾಷೆಗಳ ಎಲ್ಲೆ ಮೀರಿ ಹರಡುತ್ತಿದೆ. ವಿ.ವಿ. ಆಡಳಿತ ಮಂಡಳಿಗಳು, ಪಾಳೇಗಾರರು, ರಾಜ್ಯಪಾಲರುಗಳು, ಎಲ್ಲ ಮಾಧ್ಯಮಗಳೂ ಸೇರಿದಂತೆ ಹರಡುತ್ತಿದೆ. ಹೀಗೆ ಎಲ್ಲಾ ದೇಶಾವಸ್ಥೆಗಳಲ್ಲಿಯೂ ಶ್ಲಾಘನೀಯವಾಗಿ, ಮೋಡಿ ಮಾಡುವ ಈ ಎರಡಕ್ಷರಗಳು (ಬಿ.ಪಿ.) ಆ ಕೆಲಸ ಮಾಡುತ್ತಿವೆ. ಈ ಎರಡಕ್ಷರಗಳನ್ನು ಮತ್ತಷ್ಟು ಆಳವಾಗಿ ವಿಚಾರಮಾಡಿದರೆ, ಅವುಗಳಲ್ಲಿ ನಿಹಿತವಾಗಿರುವ ಗುಟ್ಟು "ಬೀ ಪ್ರಿಪೇರ್ಡ್"– ಸದಾಸಿದ್ಧ ಹೊರಬರುತ್ತದೆ. ಸಂತ ವೋಡ್ ಹೌಸ್ ರವರ ಮಾತಿನಲ್ಲಿ "ಪ್ರಕೃತಿ ಮಾತೆಯನ್ನಾವರಿಸಿದ ಸುರುಳಿ ಸುರುಳಿಯಾದ, ಬೂದುವಸ್ತುವಿನಂತೆ" ಅದು ಕ್ಷಣಿಕ ಭಾವನೆಯಲ್ಲ (ಸೋಮವಾರದ ಬೆಳಗ್ಗೆ ಮರೆಯುವ) ವಾರದಲ್ಲೊಂದು ದಿನದ ಆಧ್ಯಾತ್ಮ ಭಾವನೆಯಲ್ಲ; ಅಜ್ಜ ಕೃಶ್ಚಿನ್ ರವರು ಹೇಳುವಂತೆ ಅದು "ಪ್ರತಿದಿನವೂ ಸ್ವಲ್ಪ ಸ್ವಲ್ಪವಾಗಿ ನೀಡಿದ ಗುಟುಕು ಔಷಧಿಯಂತೆ" ಚೇತೋಹಾರಿ. ನಮ್ಮ ನೆರೆಯ ವಿ.ವಿ. (ಆಕ್ಸ್) ಫರ್ಡ್ (ಫರ್ಡ್=ಕಾಲ್ಗಡೆ)– ಕಾಲ್ಗಡೆಗೆ ತೃಪ್ತಿಪಟ್ಟುಕೊಂಡಂತಲ್ಲದೆ, ಅದು ನಾವು ಕ್ರಿಯಾಶೀವಲವಾಗಿ ಕಟ್ಟಿರುವ (ಕೇಂ)=ಬ್ರಿಡ್ಜ್–ಸೇತುವೆಯಂತೆ. ಲ್ಯಾಟಿನ್ ಭಾಷೆಯ ಮಹಾಕವಿ ಹೊರೇಸ್‌ರವರ ಪದಗಳು "ನಂಕ್ –ನಂಕ್" ನ ಅಕ್ಷರಗಳಲ್ಲಿ ನಿಹಿತವಾದ ಭಾವನೆಯು ಸದಾಕಾಲ–ಯಾವಾಗ? ಎಂಬ ಪ್ರಶ್ನೆಗೆ ಉತ್ತ ನೀಡುತ್ತದೆ. ಹಾಗಾಗಿ, ನಾವು ಈ ಮಹಾನ್ ಭಾವನೆಯ. "ಚಿಲುಮೆ" ಎನಿಸಿದ ವ್ಯಕ್ತಿಯನ್ನು ಗೌರವಿಸಲು ತೀರ್ಮಾನಿಸಿದೆವು. ಈ ಭಾವನೆಯು ಸುತ್ತಿ ಸುತ್ತಿ, ವಿಶ್ವವ್ಯಾಪಿಯಾಗಿ ಹರಡುತ್ತಿದೆ. ತನ್ನ ನಿಹಿತ ಶಕ್ತಿಗೆ ಸ್ವಲ್ಪವೂ ಕುಂದುಂಟಾಗದಂತೆ ಹರಡುತ್ತಿದೆ. ನಾವು ಇದನ್ನು "ಬಿ.ಪಿ.ಸ್ಪಿರಿಟ್+"ಎನ್ನೋಣವೇ? ಆದರೆ ರೋಮನ್ ಪಾನೀಯ ಸೇವಕಿಯು, ಸೀಜರನಿಗೆ "ಟೆಂಪಸ್ ಫ್ಯುಜೀಟ್" ಎಂದು ಹೇಳುವಂತೆ, ಆದಿಕಾಲದ ಮಹಾ ಸಂತ ಪೋಪ್ ಗ್ರೆಗೊರಿ–I "ಅಲ್ಲೀಲೂಯಾ" ರವರು Duco Ad Vos Exploratorum Principem" ಎಂದು ಹೇಳುವಂತೆ ಸಹ ಹೇಳಲು ಬಿಡಿ.

ಈ ರೀತಿಯಲ್ಲಿ, ಏಕಗತಿಯಲ್ಲಿ, ಮಧುರ ಕ್ಷಣಗಳು, ನಿಮ್ಮ ತಲೆಯೊಳಕ್ಕೆ ನುಸುಳುತ್ತಿದ್ದರೆ, ಎಷ್ಟೆಂದು. ಭರಿಸುವುದು? ಅದೂ, ಆ ಭಾಷಣದ ಕೊನೆಯಲ್ಲಿ ಜಪಾನೀಯ ವಂದನಾ ಸೂಚಕ ಪದ Benzine ನೊಂದಿಗೆ ಮುಗಿಸದಾಗ! ನಾನು ಉದ್ವೇಗಭರಿತನಾದೆ!!! ನಿಡುಸುಯ್ದೆ!!!"

....... ಮುಂದುವರೆಯುತ್ತದೆ.

# ರಾಜ್ಯ ವಾರ್ತೆ

## ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆ

ದಿನಾಂಕ 12-1-2009 ರಂದು ಸ್ವಾಮಿ ವಿವೇಕಾನಂದರ ಜನ್ಮದಿನವನ್ನು ರಾಷ್ಟ್ರೀಯ ಯುವ ದಿನವನ್ನಾಗಿ ಆಚರಿಸಿ ತತ್ಸಂಬಂಧವಾಗಿ ವಿವಿಧ ಕಾರ್ಯಕ್ರಮಗಳನ್ನು ರಾಜ್ಯ ಸಂಸ್ಥೆಯ ವತಿಯಿಂದ ಹಮ್ಮಿಕೊಳ್ಳಲಾಗಿತ್ತು.

ಬೆಂಗಳೂರು ಉತ್ತರ ಹಾಗೂ ದಕ್ಷಿಣ ಜಿಲ್ಲೆಗಳಿಂದ ಆಗಮಿಸಿದ್ದ ಸುಮಾರು 400 ಮಂದಿ ಸ್ಕೌಟ್-ಗೈಡ್‌ಗಳು ಹಾಗೂ ವಯಸ್ಕ ನಾಯಕರುಗಳು ಅಖಿಲ ಕರ್ನಾಟಕ ಮಕ್ಕಳ ಕೂಟ ಆವರಣದಲ್ಲಿ ಅಂದು ಬೆಳಗ್ಗೆ 9-30ಕ್ಕೆ ಸೇರಿದರು. ಮಕ್ಕಳ ಕೂಟದ ಕಾರ್ಯದರ್ಶಿಗಳಾದ ಶ್ರೀ ಎಂ. ರಾಮರಾವ್ ಮತ್ತು ಹಿರಿಯ ಸ್ಕೌಟರ್ ಆದ ಶ್ರೀ ಎಸ್.ಕೆ.ಆರ್. ಬೋನ್ಸ್ಲೆ ಅವರುಗಳು ಹಸಿರು ಬಾವುಟ ತೋರಿಸುವುದರ ಮೂಲಕ ಸ್ಕೌಟ್/ಗೈಡ್‌ಗಳ ಪಥಚಲನವನ್ನು ಉದ್ಘಾಟಿಸಿದರು. ಪಥಚಲನವು ಕೊಂಡಜ್ಜಿ ಬಸಪ್ಪ ರಸ್ತೆ, ಬಸಪ್ಪ ವೃತ್ತ, ವಿಶ್ವೇಶ್ವರಪುರಂ ವೃತ್ತದ ಮೂಲಕ ಹೊರಟು, ಕೆ.ಆರ್. ರಸ್ತೆಯ ಮೂಲಕ ಮಕ್ಕಳ ಕೂಟ ಆವರಣಕ್ಕೆ ಬಂದು ಸೇರಿತು. ಸ್ವಾಮಿ ವಿವೇಕಾನಂದರ ಭಾವಚಿತ್ರ ಮತ್ತು ಸ್ವಾಮಿ ವಿವೇಕಾನಂದರ ಹೇಳಿಕೆಗಳ ಫಲಕಗಳನ್ನು ಸ್ಕೌಟ್-ಗೈಡ್‌ಗಳು ಹಿಡಿದಿದ್ದರು.

ಆನಂತರ ಸ್ಕೌಟ್-ಗೈಡ್‌ಗಳಿಗಾಗಿ ಸ್ವಾಮಿ ವಿವೇಕಾನಂದರ ಬಗ್ಗೆ ಚಿತ್ರರಚನಾ ಸ್ಪರ್ಧೆ, ಲೇಖನ ಸ್ಪರ್ಧೆ ಹಾಗೂ ಭಾಷಣ ಸ್ಪರ್ಧೆಗಳನ್ನು ನಡೆಸಲಾಯಿತು. ಗುಂಪು ಹಾಡುವಿಕೆ ಸ್ಪರ್ಧೆಯನ್ನು ಸಹ ಆಯೋಜಿಸಲಾಗಿತ್ತು.

ಸಂಜೆ 3-30ಕ್ಕೆ ಸರಿಯಾಗಿ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ವಹಿಸಿದ್ದರು. ಕರ್ನಾಟಕ ಜಾನಪದ ಅಕಾಡೆಮಿಯ ಅಧ್ಯಕ್ಷರೂ ಮತ್ತು ಭಾರತ್ ಸ್ಕೌಟ್ ಮತ್ತು ಗೈಡ್ ರಾಜ್ಯ ಸಂಸ್ಥೆಯ ಪ್ರಕಟನಾ ವಿಭಾಗದ ಅಧ್ಯಕ್ಷರೂ ಆದ ಶ್ರೀ. ಗೊ.ರು. ಚನ್ನಬಸಪ್ಪ ರವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡುತ್ತಾ ವಿಧೇಯತೆಯ ಮಹತ್ವವನ್ನು ತಿಳಿ ಹೇಳಿದರು. ಸ್ವಾಮಿ ವಿವೇಕಾನಂದರ ಆದರ್ಶಗಳನ್ನು ಮೈಗೂಡಿಸಿಕೊಳ್ಳಲು ಕರೆಯಿತ್ತರು. ಮಕ್ಕಳ ಕೂಟದ ಕಾರ್ಯದರ್ಶಿಗಳಾದ ಶ್ರೀ ಎಂ. ರಾಮರಾವ್ ಹಾಗೂ ರಾಜ್ಯ ಪದಾಧಿಕಾರಿಗಳು ಸಭೆಯಲ್ಲಿ ಉಪಸ್ಥಿತರಿದ್ದರು. ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನು ವಿತರಿಸಲಾಯಿತು.

## ರಾಜ್ಯಮಟ್ಟದ ರೋವರ್‌ಗಳ ಸಮುದಾಯ ಅಭಿವೃದ್ಧಿ ಶಿಬಿರ 2008-09

ದಿನಾಂಕ : 17-12-2008 ರಿದ 21-12-08 ರಂದು ರಾಜ್ಯ ತರಬೇತಿ ಕೇಂದ್ರ, ಬೆಸೆಂಟ್ ಪಾರ್ಕ್, ದೊಡ್ಡಬಳ್ಳಾಪುರದಲ್ಲಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ರಾಜ್ಯಮಟ್ಟದ ರೋವರ್‌ಗಳ ಸಮುದಾಯ ಅಭಿವೃದ್ಧಿ ಶಿಬಿರವು ನಡೆಯಿತು. ಈ ಶಿಬಿರದಲ್ಲಿ ರಾಜ್ಯದ 7 ಜಿಲ್ಲೆಗಳಿಂದ ಒಟ್ಟು 66 ರೋವರ್‌ಗಳು ಭಾಗವಹಿಸಿ ತಮ್ಮ ಪ್ರಾಮಾಣಿಕ ಸೇವೆಯನ್ನು ಸಲ್ಲಿಸಿರುತ್ತಾರೆ.

ಶಿಬಿರದ ನಾಯಕರಾಗಿ ಆನೇಕಲ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಮತ್ತು ಭಗತ್‌ಸಿಂಗ್ ಓಪನ್ ರೋವರ್ ಗುಂಪಿನ ನಾಯಕನಾದ ಶ್ರೀ ಎ.ಎನ್. ನರೇಂದ್ರಕುಮಾರ್, ಸಹಾಯಕರಾಗಿ ಬೆಂಗಳೂರು ದಕ್ಷಿಣ ಜಿಲ್ಲೆಯ ಶ್ರೀ ಎಂ. ಶ್ರೀನಿವಾಸ್, ಶ್ರೀ ಎಂ.ಎ. ಚಲ್ಲಯ್ಯ, ಎ.ಎಸ್.ಓ.ಸಿ. ಗಳಾದ ಶ್ರೀ ಮಂಜುನಾಥಾಚಾರ್, ಓಮೇಶ್ವರಯ್ಯ, ಶ್ರೀ ಎ.ಎಂ. ಶಂಕರ್ ಕಾರ್ಯ ನಿರ್ವಹಿಸಿದರು.

ಒಟ್ಟಾರೆ ಬಿಡುವಿಲ್ಲದ ಕಾರ್ಯದಲ್ಲಿ ತೊಡಗಿದ ರೋವರ್‌ಗಳು ಅವಿಸ್ಮರಣೀಯವಾದ ಸೇವೆಯನ್ನು ಸಲ್ಲಿಸಿ ನಮ್ಮ ರಾಜ್ಯ ತರಬೇತಿ ಕೇಂದ್ರದ ಮೆರುಗನ್ನು ಹೆಚ್ಚಿಸುವಲ್ಲಿ ಸಫಲರಾಗಿದ್ದಾರೆ.

# ಜಿಲ್ಲಾ ವಾರ್ತೆ

## ಹಾವೇರಿ ಜಿಲ್ಲೆ

ದಿನಾಂಕ 11-01-2009 ರಂದು ಹಾವೇರಿ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರದ ಬೂ-ವೀರಾಪುರದಲ್ಲಿ "ಅನ್ನಪೂರ್ಣ" (ಅಡಿಗೆ ಮನೆ) ನೂತನ ಕಟ್ಟಡದ ಉದ್ಘಾಟನಾ ಸಮಾರಂಭ ಹಾಗೂ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರವು ಸ.ಹಿ.ಪ್ರಾ ಶಾಲೆ, ಬೂ-ವಿರಾಪುರ ದಲ್ಲಿ ಜರುಗಿತು.

ಮಾನ್ಯ ಶ್ರೀ ನೆಹರು ಚ. ಓಲೇಕಾರ ವಿಧಾನಸಭೆ ಸದಸ್ಯರು, ಹಾವೇರಿ ಹಾಗೂ ಅಧ್ಯಕ್ಷರು ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡಗಳ-ಆಯೋಗ, ಕರ್ನಾಟಕ ಸರಕಾರ ಬೆಂಗಳೂರು, ಇವರು ನೂತನವಾಗಿ ಕಟ್ಟಿದ ಅಡುಗೆಮನೆ ಕಟ್ಟಡವನ್ನು ಉದ್ಘಾಟನೆ ಮಾಡಿ, ಈ ಸಂಸ್ಥೆಗೆ ಸದಾಕಾಲ ನನ್ನ ಸಹಕಾರ ಇರುತ್ತದೆ. ಈ ತರಬೇತಿ ಕೇಂದ್ರವನ್ನು ಜಿಲ್ಲಾ ವಿಶ್ರಾಂತಿಧಾಮವನ್ನಾಗಿ ಮಾಡೋಣ ಹಾಗು ಗ್ರಾಮ ಪಂಚಾಯಿತಿ ವತಿಯಿಂದ ಕೂಲಿ ಕಾರ್ಮಿಕರ ಯೋಜನೆ ಅಡಿಯಲ್ಲಿ 20 ಲಕ್ಷ ರೂಪಾಯಿಗಳ ಅನುದಾನದಲ್ಲಿ ತರಬೇತಿ ಕೇಂದ್ರದ ಸಮತಟ್ಟ ಹಾಗೂ ತಂತಿ ಬೇಲಿ ಮುಂದಿನ ಭಾಗ ಕಾಂಪೌಂಡ್ ಕಟ್ಟಡ ಕಟ್ಟಿಸುವುದಕ್ಕೆ ಹೇಳಿ ಸ್ಕೌಟ್ ಭವನದ ನಿರ್ಮಾಣಕ್ಕಾಗಿ 2.50 ಲಕ್ಷ ರೂಪಾಯಿಗಳ ಚೆಕ್ ನೀಡಿ ಮತ್ತೆ ಅನುದಾನ ನೀಡುತ್ತೇನೆ ಎಂದು ತಿಳಿಸಿದರು. ಮುಖ್ಯ ಅತಿಥಿಗಳಾದ ಶ್ರೀಮತಿ ಮಂಜುಳಾ ಕರಿಬಸಮ್ಮನವರ, ಅಧ್ಯಕ್ಷರು, ಪುರಸಭೆ ಹಾವೇರಿ ಇವರು ಭಾಘವಹಿಸಿ ಅಡುಗೆ ಮನೆಯಲ್ಲಿ ಹಾಲು ಉಕ್ಕಿಸಿ ಶುಭಕೋರಿ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಸಮವಸ್ತ್ರಗಳನ್ನು ಪುರಸಭೆಯಿಂದ ಪೂರೈಕೆ ಮಾಡುತ್ತೇವೆ ಹಾಗೂ ಜಿಲ್ಲಾ ಸಂಸ್ಥೆಗೆ ಪುರಸಭೆಯಿಂದ ಅಡುಗೆ ಪಾತ್ರೆಗಳನ್ನು ಕೊಡುತ್ತೇವೆ ಎಂದು ತಿಳಿಸಿ ನನ್ನ ಸಲಹೆ ಸಹಕಾರ ಯಾವತ್ತೂ ಇದೆ ಎಂದು ತಿಳಿಸಿದರು.

ಇನ್ನೋರ್ವ ಅತಿಥಿಗಳಾದ ಶ್ರೀ ಡಿ.ವಿ. ಬೆಲ್ಲದ ನಿವೃತ್ತ ಉಪನಿರ್ದೇಶಕರು ಇವರು ಇಂತಹ ಶಿಸ್ತು ಪ್ರಜ್ಞೆ ನೀಡುವಂತಹ ಸಂಸ್ಥೆಗಳಿಗೆ ಹೆಚ್ಚು ಹೆಚ್ಚು ಮಕ್ಕಳು ಸೇರಬೇಕು. ಇದರಿಂದ ಮಕ್ಕಳ ಕೀರ್ತಿ ಬೆಳಗುತ್ತೆ ಎಂದು ತಿಳಿಸಿದರು.

ಅತಿಥಿಗಳಾಗಿ ಶ್ರೀ ವೈ.ಎಸ್. ರಾಮನಗೌಡ್ರು, ಶ್ರೀ ನಿಂಗಪ್ಪ ಹೊಸಳ್ಳಿ ಅಧ್ಯಕ್ಷರು, ಗ್ರಾ. ಪಂಚಾಯಿತಿ ಕಳ್ಳಿಹಾಳ, ಶ್ರೀ ಶಿವಪುತ್ರಪ್ಪ, ಗಾಳೇಪ್ಪನವರ ಸದಸ್ಯರು ಗ್ರಾ. ಪಂಚಾಯಿತಿ ಶ್ರೀ ಎ.ವೈ. ಹಾವಕ್ಕನವರ ಅಧ್ಯಕ್ಷರು. ಎಸ್.ಡಿ.ಎಂ.ಸಿ. ಬೂ-ವಿರಾಪುರ ಶ್ರೀ ಕೆ.ಸಿ. ಕುಲಕರ್ಣಿ ಶ್ರಿ ಬೆನ್ನಿಕಟ್ಟಿ, ಸದಸ್ಯರು, ಪುರಸಭೆ ಶ್ರೀ ಗೋಣಿ, ಮುಖ್ಯೋಪಾಧ್ಯಾಯರು ಬೂ-ವೀರಾಪುರ ಇವರು ಭಾಗವಹಿಸಿದ್ದರು.

ಶ್ರೀ ಪ್ರಭಾಕರರಾವ್ ಮಂಗಳೂರ್, ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿ ತರಬೇತಿ ಕೇಂದ್ರವನ್ನು ಎಲ್ಲರ ಸಹಕಾರದೊಂದಿಗೆ ರಾಜ್ಯದಲ್ಲಿ ಉತ್ತಮ ಮಾದರಿ ಆಗುವ ಹಾಗೆ ಕಟ್ಟೋಣ ಎಂದು ತಿಳಿಸಿದರು.

ದಿನಾಂಕ : 10-01-2009ರಿಂದ ನಡೆದ 2 ದಿನದ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರಕ್ಕೆ ಶ್ರೀ ಎ. ಯರಣ್ಣ ಡಿ.ಓ.ಸಿ. ಕೊಪ್ಪಳ, ಗೈಡ್ ವಿಭಾಗದ ಪರೀಕ್ಷಕರಾಗಿ ಶ್ರೀಮತಿ ಉಮಾ ಎಮ್. ಭಾಗವಹಿಸಿದ್ದರು. 116 ಸ್ಕೌಟ್ ಮಕ್ಕಳು 83 ಗೈಡ್ಸ್‌ಗಳು 23 ಕಬ್ಸ್‌ಗಳು 18 ಬುಲ್ ಬುಲ್‌ಗಳು ಹಾಜರಿದ್ದರು.

ಸ್ಕೌಟ್ ಮಾಸ್ಟರ್ ರಾದ ಶ್ರಿ ವೈ.ಎಸ್. ಕುತನಿ, ಶ್ರೀ ಎಸ್.ಎಂ. ಚಳಗೇರಿ, ಶ್ರೀ ಎನ್.ಬಿ. ಹಾವನೂರ, ಶ್ರೀ ಗೋನಾಳ, ಶ್ರೀಮತಿ ವೀಣಾ ಎಂ. ಶ್ರೀಮತಿ ಕಮ್ಮಾರ, ಶ್ರೀಮತಿ ಎ.ಟಿ. ನೀರಲಾಗಿ ಮುಂತಾದವರು ಶಿಬಿರಲ್ಲಿ ಭಾಗವಹಿಸಿದ್ದರು.

ಶ್ರೀ ಎನ್. ಎಂ. ಹಾವೇರಿ, ಜಿಲ್ಲಾ ಕಾರ್ಯದರ್ಶಿಯವರು ಸ್ವಾಗತಿಸಿದರು. ಜಿಲ್ಲಾ ಗೈಡ್ಸ್ ಆಯುಕ್ತೆ, ಶ್ರೀಮತಿ ಮಾದುರಿ ದೇವದರ ಪ್ರಾಸ್ತಾವಿಕ ನುಡಿ ನುಡಿದರು. ಶ್ರೀ ವಿ.ಸಿ. ಮೊಗಲಿ ಶೆಟ್ಟರ್, ಖಜಾಂಚಿ, ಶ್ರೀ ಕೆ.ಸಿ. ಕೋರಿ, ಜಿಲ್ಲಾ ಸ್ಥಾನಿಕ ಆಯುಕ್ತರುಇವರು ಶಾಸಕರಿಗೆ ಮನವಿ ಅರ್ಪಿಸಿದರು. ಶ್ರೀ ಎ.ಎಲ್. ಶೇಖಸೂರಣಗಿ ಡಿ.ಓ.ಸಿ. ಯವರು ಕಾರ್ಯಕ್ರಮ ನೀಡಿದರು. ಶ್ರೀ ಆರ್.ಆರ್. ಕಾಶಪ್ಪನವರ್ ಜಿಲ್ಲಾ ಸ್ಥಾನಿಕ ಆಯುಕ್ತರು ಇವರು ವಂದನಾರ್ಪಣೆ ಮಾಡಿದರು. •

## ಗದಗ ಜಿಲ್ಲೆ

ದಿನಾಂಕ : 28–12–08 ರಿಂದ 30–12–08 ರ ವರೆಗೆ ಶಿರಹಟ್ಟಿ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ತಾಲ್ಲೂಕು ಮಟ್ಟದ ಸ್ಕೌಟ್ಸ್–ಗೈಡ್ಸ್ ಮೇಳ ಹಾಗೂ ಭಾವೈಕ್ಯತೆ ಶಿಬಿರ ತಾಲ್ಲೂಕಿನ ಛಬ್ಬಿ ಗ್ರಾಮದ ಸ.ಹಿ.ಪ್ರಾ.ಶಾಲೆ ಮೈದಾನದಲ್ಲಿ ನಡೆಯಿತು. ಶಾಸಕರಾದ ಮಾನ್ಯ ಶ್ರೀ ರಾಮಣ್ಣ ಲಮಾಣಿ ಇವರಿಂದ ಉದ್ಘಾಟನೆ ನೆರವೇರಿತು. ವರವಿ ಮಠದ ಶ್ರೀ ವಿರೂಪಾಕ್ಷ ಸ್ವಾಮೀಜಿಯವರ ಸಾನ್ನಿಧ್ಯ. ತಹಶೀಲ್ದಾರ ಶ್ರೀ ಜಿ.ಎಚ್. ಸೋಮಲಿಂಗಪ್ಪನವರ ಅಧ್ಯಕ್ಷತೆ ಹಾಗೂ ಶ್ರೀಮತಿ ಕಮಲವ್ವ ಪೂಜಾರ, ಜಿ.ಪಂ. ಸದಸ್ಯ ಮಹಾಜನಶೆಟ್ಟರ್, ಗ್ರಾ. ಪಂ. ಅಧ್ಯಕ್ಷ, ಶ್ರೀಮತಿ ಗುರಮ್ಮನವರ್ ಉಪಾಧ್ಯಕ್ಷೆ ಶ್ರೀಮತಿ ಶಾಂತವ್ವ, ಶ್ರೀ ತಳವಾರ ಟಿ.ಬಿ. ಕುಲಕರ್ಣಿ, ಶ್ರೀ ವೀರಣ್ಣ ಚಕ್ರಸಾಲಿ ಇವರುಗಳ ಉಪಸ್ಥಿತಿಯಲ್ಲಿ ಕಾರ್ಯಕ್ರಮವ ಜರುಗಿತು. ಸರ್ವಧರ್ಮ ಪ್ರಾರ್ಥನೆಯ ಅಧ್ಯಕ್ಷತೆಯನ್ನು ಶ್ರೀಮತಿ ಯಲ್ಲಮ್ಮ ಹರತಾಳ ವಹಿಸಿದ್ದರು.

ದಿನಾಂಕ : 6–1–2009 ರಂದು ರೋಣ ತಾಲ್ಲೂಕ್ ಸ್ಕೌಟರ್ ಗೈಡರ್ ಸಮ್ಮೇಳನ ಜರುಗಿತು. 52 ಸ್ಕೌಟರ್–ಗೈಡರ್‌ಗಳು ಭಾಗವಹಿಸಿದ್ದರು. ಶ್ರೀಯುತ ಎ.ಎನ್. ಯಡಹಳ್ಳಿಯವರು ಅಧ್ಯಕ್ಷರಾಗಿ ಇಂದಿನ ಸಮ್ಮೇಳನವು ತಮಗೆ ಸ್ಕೌಟ್ ಚಟುವಟಿಕೆಗಳಲ್ಲಿ ಸಹಾಯಕವಾಗಲಿ ಎಂದು ನುಡಿದರು. ಅತಿಥಿಗಳಾಗಿ ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಕಿಲಬನವರ್ ಭಾಗವಹಿಸಿದ್ದರು.

## ಉಡುಪಿ ಜಿಲ್ಲೆ

### ರೋವರ್ಸ್ ಮತ್ತು ರೇಂಜರ್ಸ್ ಘಟಕ ಉದ್ಘಾಟನೆ ಜಿಲ್ಲಾ ಮೊದಲ ರೋವರ್ಸ್ ಘಟಕಕ್ಕೆ ಚಾಲನೆ

ದಿನಾಂಕ 15–01–09 ರಂದು ಮಾಧವ ಪೈ ಸ್ಮಾರಕ ಕಾಲೇಜಿನ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರೋವರ್ಸ್ ಮತ್ತು ರೇಂಜರ್ಸ್ ಘಟಕದ ಉದ್ಘಾಟನೆಯನ್ನು ರೋಟೇರಿಯನ್ ಗಣೇಶ್‌ರಾವ್ ನೆರವೇರಿಸಿದರು. ಅವರು ಮಾತನಾಡಿ ಯುವಕರು ದೇಶಸೇವೆ ಯಲ್ಲಿ ಹೆಚ್ಚು ಹೆಚ್ಚು ತೊಡಗಿಸಿಕೊಳ್ಳಬೇಕು ಎಂದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ರಬೀಂದ್ರ ನಾಯಕ್ ವಹಿಸಿದ್ದರು. ವೇದಿಕೆಯಲ್ಲಿ ಕಾಲೇಜಿನ ಪ್ರಾಂಶುಪಾಲ ಪ್ರೊ. ಪಿ. ದಯಾನಂದ ಶೆಟ್ಟಿ, ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ಪ್ರಭಾಕರ ಭಟ್, ಜಿಲ್ಲಾ ಗೈಡ್ಸ್ ಆಯುಕ್ತೆ ಶ್ರೀಮತಿ ರಾಜಲಕ್ಷ್ಮಿ ಡಿ. ಶೆಟ್ಟಿ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಗುಣಕರ ಶೆಟ್ಟಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖರ ಪೂಜಾರಿ, ಶ್ರೀ ಬಿ.ಜಿ. ವಾರಂಬಳ್ಳಿ, ಕಾಲೇಜು ರೋವರ್ಸ್ ಘಟಕದ ಅಧಿಕಾರಿ ಶ್ರೀ ಡೊಂಬಯ್ಯ ಇಡ್ಕಿದು ಉಪಸ್ಥಿತರಿದ್ದರು.

*****************************

ದಿನಾಂಕ 12-01-2009 ರಂದು ಮಾಧವ ಪೈ ಸ್ಮಾರಕ ಕಾಲೇಜ್‌ನ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಸಂಸ್ಥೆ, ಉಡುಪಿ ಮತ್ತು ರೋಟರಿ ಕ್ಲಬ್ ಉಡುಪಿ, ಇವರ ಸಂಯುಕ್ತಾಶ್ರಯದಲ್ಲಿ ವಿವೇಕಾನಂದ ಜಯಂತಿಯ ಅಂಗವಾಗಿ ರಾಷ್ಟ್ರೀಯ ಯುವ ದಿನಾಚರಣೆಯನ್ನು ಅಚರಿಸಲಾಯಿತು.

ವಿವೇಕಾನಂದ ಜಯಂತಿಯನ್ನು ಉದ್ಘಾಟಿಸಿ ಮಾತನಾಡಿದ ರೋಟೇರಿಯನ್ ಗಣೇಶ್‌ರಾವ್ ಭವಿಷ್ಯವು ಇರುವುದು ಶೀಲವಂತರಾದ ಯುವ ಜನರಲ್ಲಿ ಎಂದು ನುಡಿದರು.

ಇದರ ಅಂಗವಾಗಿ ಅಂತರ್ ಕಾಲೇಜು ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು.

ಅಧ್ಯಕ್ಷತೆಯನ್ನು ವಹಿಸಿದ್ದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶ್ರೀರಬೀಂದ್ರ ನಾಯಕ್ ವಿಜೇತರಿಗೆ ಪ್ರಶಸ್ತಿ ವಿತರಿಸಿದರು.

ವೇದಿಕೆಯಲ್ಲಿ ಕಾಲೇಜಿನ ಪ್ರಾಂಶುಪಾಲ ಪ್ರೊ.ಪಿ. ದಯಾನಂದ ಶೆಟ್ಟಿ, ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

****************************

ದಿನಾಂಕ 11-12-08 ರಿಂದ 12-12-08 ರಂದು ಬೈಂದೂರು ಮಯ್ಯಾಡಿಯ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ವತಿಯಿಂದ 2008-09ನೇ ಸಾಲಿನ ಸ್ಕೌಟ್ಸ್-ಗೈಡ್ಸ್ ರ್‍ಯಾಲಿ ಮತ್ತು ಕಬ್-ಬುಲ್‌ಬುಲ್ ಉತ್ಸವವನ್ನು ನಡೆಸಲಾಯಿತು.

ರ್‍ಯಾಲಿಯ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರಿ ದೀಪಕ್ ಕುಮಾರ್ ಶೆಟ್ಟಿ ತಾಲ್ಲೂಕು ಪಂಚಾಯತ್ ಸದಸ್ಯರು ವಹಿಸಿದ್ದರು. ತಾಲ್ಲೂಕ್ ಪಂಚಾಯತ್ ಅಧ್ಯಕ್ಷರು ಮತ್ತು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ರಾಜು ದೇವಾಡಿಗರು ರ್‍ಯಾಲಿಯನ್ನು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ. ಕೃಷ್ಣಯ್ಯ ಗ್ರಾಮ ಪಂಚಾಯತ್ ಸದಸ್ಯರು, ಶ್ರೀಮತಿ ವಸಂತಿ ಎನ್. ಮದ್ದೋಡಿ, ಶ್ರೀ ರಾಜು ಪೂಜಾರಿ ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿ ಬೈಂದೂರು, ಶ್ರೀ ವಿಶ್ವನಾಥ ಪೂಜಾರಿ ಪ್ರಾ.ಶಾ.ಶಿ. ಸಂಘದ ಅಧ್ಯಕ್ಷರು, ಹೆಚ್ಚ. ವಿಜಯ ಗುತ್ತಿಗೆದಾರರು ಮಯ್ಯಾಡಿ, ಶಾಲಾ ಮುಖ್ಯ ಶಿಕ್ಷಕಿ ಶ್ರೀಮತಿ ವೇದಾವತಿಯವರು ಉಪಸ್ಥಿತರಿದ್ದರು. ರ್‍ಯಾಲಿ ನಾಯಕ ಶ್ರೀ ಜಿ. ಹನುಮಂತ ಇವರು ಶಿಬಿರದ ಮುನ್ನೋಟ ನೀಡಿದರು. ಸ.ಪ.ಪೂ. ಕಾಲೇಜು, ಬೈಂದೂರು ಇಲ್ಲಿಯ ಪ್ರಾಂಶುಪಾಲರು ಶ್ರೀ ಸುಬ್ರಹ್ಮಣ್ಯ ಜೋಶಿಯವರು ಶುಭಾಶಯ ಕೋರಿದರು. ಹಿರಿಯ ಸ್ಕೌಟರ್ ಶ್ರೀ ಬಿ. ಆನಂದ ಅಡಿಗ ಎಲ್.ಟಿ.(ಸ್ಕೌಟ್ಸ್) ಪ್ರಾಸ್ತಾವಿಕ ಮಾತನ್ನಾಡಿದರು. ಶ್ರೀ ಕೊಗ್ಗ ಗಾಣಿಗ ಜಿಲ್ಲಾ ತರಬೇತಿ ಆಯುಕ್ತರು ಸ್ವಾಗತಿಸಿದರು. ಬೈಂದೂರು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಪಿ. ನರಸಿಂಹಮೂರ್ತಿಯವರು ವಂದನಾರ್ಪಣೆ ಗೈದರು. ಶ್ರೀ ಶೇಖರ್ ಗಾಣಿಗ ನಿರೂಪಣೆ ಮಾಡಿದರು.

ಸಂಜೆ ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ಹೆಚ್. ನಾಗಯ್ಯ ನಿವೃತ್ತ ಶಿಕ್ಷಕರು ಉದ್ಘಾಟಿಸಿದರು. ದಿನಾಂಕ : 12-12-2008 ರಂದು ಪೂರ್ವಾಹ್ನ ಬೈಂದೂರು ಕ್ಷೇತ್ರ ಶಿಕ್ಷಣಾಧಿಕಾರಿಗಳು ರ್‍ಯಾಲಿಯನ್ನು ವೀಕ್ಷಿಸಿ ಪಥಸಂಚಲನದ ಗೌರವ ರಕ್ಷೆ ಸ್ವೀಕರಿಸಿದರು. ಸಂಜೆ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ತಾಲ್ಲೂಕ್ ಪಂಚಾಯತ್ ಅಧ್ಯಕ್ಷರಾದ ಶ್ರೀ ರಾಜು ದೇವಾಡಿಗರು ತ್ರಾಸಿ, ಇವರು ವಹಿಸಿದ್ದರು. ಬೈಂದೂರು ವ್ಯವಸಾಯ ಸೇವಕ ಸಹಕಾರಿ ಬ್ಯಾಂಕ್, ಯಡ್ತರೆ ಇದರ ಅಧ್ಯಕ್ಷರಾದ ಶ್ರೀ ನಾರಾಯಣ್ ಹೆಗ್ಡೆಯವರು ಸಮಾರೋಪ ಭಾಷಣವನ್ನು ಮಾಡಿದರು. ಮುಖ್ಯ ಅತಿಥಿಗಳಾದ ಶ್ರೀಮತಿ ರೇವತಿ ಮದ್ದೋಡಿ, ಗ್ರಾ.ಪಂ. ಸದಸ್ಯರು, ಶ್ರಿ ಗೋಪಾಲಕೃಷ್ಣ ಉದ್ಯಮಿ, ಬೈಂದೂರು,

ಕ್ಷೇತ್ರ ಶಿಕ್ಷಣಾಧಿಕಾರಿಗಳು ಶ್ರೀ ಬಿ. ಶೇಖರ್ ಮತ್ತು ಮುಖ್ಯ ಶಿಕ್ಷಕಿ ವೇದಾವತಿ ಉಪಸ್ಥಿತರಿದ್ದರು. ಕೊನೆಯಲ್ಲಿ ಶಾಲಾ ಶಿಕ್ಷಕ ಶ್ರೀ ಗಣಪತಿ ಕೆ. ವಂದಿಸಿದರು. ಈ ರ್‍ಯಾಲಿಯಲ್ಲಿ 38 ಶಾಲೆಯ 256 ಸ್ಕೌಟ್ಸ್-ಗೈಡ್ಸ್‌ಗಳು, 133 ಕಬ್, ಬುಲ್‌ಬುಲ್‌ಗಳು ಹಾಗು 48 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿ, ಕಾರ್ಯಕ್ರಮವನ್ನು ಯಶಸ್ವಿ ಗೊಳಿಸಿದರು.

****************************

ದಿನಾಂಕ 6-12-2008 ರಿಂದ 7-12-2008 ರ ವರೆಗೆ ಷಟ್ಕ/ಪಟಾಲಂ ನಾಯಕರ ತರಬೇತಿ ಶಿಬಿರವು ಕೆ.ಜೆ.ಜೆ. ಸರಕಾರಿ ಸಂಯುಕ್ತ ಪ್ರೌಢಶಾಲೆ, ಕೋಣಿಯಲ್ಲಿ ನಡೆಯಿತು. ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಎಸ್. ದಿನಕರ್ ಶೆಟ್ಟಿ ಅಧ್ಯಕ್ಷತೆ ವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಗೋಪಾಲಶೆಟ್ಟಿಯವರು ಉದ್ಘಾಟಿಸಿದರು. ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಬಾಬು ಪೂಜಾರಿ, ಹಳೆ ವಿದ್ಯಾರ್ಥಿ ಸಂಘದ ಅಧ್ಯಕ್ಷರಾದ ಶ್ರೀ ನಾಗರಾಜ್ ಆಚಾರ್, ಮುಖ್ಯೋಪಾಧ್ಯಾಯರಾದ ಶ್ರೀ ರಘುವೀರ್ ಕೆ., ತರಬೇತುದಾರರಾದ ಶ್ರೀ ಕೊಗ್ಗ ಗಾಣಿಗ ಡಿ.ಟಿ.ಸಿ.(ಎಸ್.) ಉಪಸ್ಥಿತರಿದ್ದರು. ಕಾರ್ಯದರ್ಶಿ ಶ್ರೀಮತಿ ಫ್ಲೋರಿನ್ ನೊರೋನ್ಹಾ ಸ್ವಾಗತಿಸಿದರು. ಜೊತೆ ಕಾರ್ಯದರ್ಶಿ ಶ್ರೀ ಆನಂದ ಪೂಜಾರಿ ವಂದಿಸಿದರು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಸಮನ್ವಯ ಶಿಕ್ಷಣಾಧಿಕಾರಿಗಳಾದ ಶ್ರೀ ಪ್ರಭಾಕರ್ ಮಿತ್ಯಾಂತರು ವಹಿಸಿದ್ದರು. ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಕೃಷ್ಣದೇವ ಕಾರಂತ್, ಶ್ರೀ ರಘುವೀರ್ ಕೆ., ಈ ಶಿಬಿರದಲ್ಲಿ 155 ಸ್ಕೌಟ್ಸ್-ಗೈಡ್ಸ್, 30 ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

**ಶ್ರದ್ಧಾಂಜಲಿ ಸಭೆ ಮತ್ತು ಜಾಥಾ**

ದಿನಾಂಕ 13-12-2008 ರಂದು ಶ್ರದ್ಧಾಂಜಲಿ ಸಭೆ ಮತ್ತು ಜಾಥಾ ಕುಂದಾಪುರದಲ್ಲಿ ನಡೆಯಿತು. ಮುಂಬೈಯಲ್ಲಿ ನಡೆದ ದುರ್ಘಟನೆಯಲ್ಲಿ ಮಡಿದ ಪೊಲೀಸ್ ಅಧಿಕಾರಿ, ವೀರಯೋಧರು, ಮುಗ್ಧ ನಾಗರೀಕರನ್ನು ಸ್ಮರಿಸಲಾಯಿತು. ಭಯೋತ್ಪಾದನೆ ನಿರ್ಮೂಲನೆ ಫಲಕಗಳನ್ನು ಪ್ರದರ್ಶಿಸಲಾಯಿತು. ಅಧ್ಯಕ್ಷರಾದ ಶ್ರೀ ಎಸ್. ದಿನಕರ್ ಶೆಟ್ಟಿ ಉದ್ಘಾಟಿಸಿದರು. ಶ್ರೀಮತಿ ಗುಣರತ್ನ, ಹಿರಿಯ ಸ್ಕೌಟರ್ ಶ್ರೀ ಆನಂದ ಅಡಿಗೆ ಎಲ್.ಟಿ.(ಸ್ಕೌಟ್ಸ್) ಮಾತನಾಡಿದರು. ಒಟ್ಟು 360 ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ 25 ಸ್ಕೌಟರ್ಸ್, ಗೈಡರ್ಸ್‌ಗಳು ಭಾಗವಹಿಸಿದ್ದರು.

## ತುಮಕೂರು ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ತುಮಕೂರು ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಮಟ್ಟದ ಸ್ಕೌಟ್-ಗೈಡ್ ರ್‍ಯಾಲಿಯನ್ನು ದಿನಾಂಕ 14-12-2008 ರಂದು ಕಂಠೀರವದ ಸ್ಕೌಟ್ ಭವನದ ಆವರಣ, ಗಾಂಧೀನಗರ ತುಮಕೂರು. ಇಲ್ಲಿ ನಡೆಸಲಾಯಿತು. ತುಮಕೂರು ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ 800 ಸ್ಕೌಟ್ಸ್-ಗೈಡ್ಸ್‌ಗಳು ರ್‍ಯಾಲಿಯಲ್ಲಿ ಭಾಗವಹಿಸಿದ್ದರು.

ಅಂದು ನಡೆದ ನಗರ ಪ್ರದಕ್ಷಿಣೆಯಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಸಾರ್ವಜನಿಕರ ಗಮನ ಸೆಳೆದರು ಮತ್ತು ಅಂದು ನಡೆದ ಸಾಂಸ್ಕೃತಿಕ ಕಾರ್ಯಕ್ರಮಗಳು ಭಾವೈಕ್ಯತೆಯನ್ನು ಸಾರುವಂತಿದ್ದವು. ಕಾರ್ಯಕ್ರಮ ಪ್ರಾರಂಭಕ್ಕಿಂತ ಮೊದಲು ಮುಂಬೈನಲ್ಲಿ ನಡೆದ ಭಯೋತ್ಪಾದನೆ ಕೃತ್ಯದಲ್ಲಿ ಮಡಿದ ಯೋಧರಿಗೆ ಮತ್ತು ಸಾರ್ವಜನಿಕರ ಆತ್ಮಕ್ಕೆ ಶಾಂತಿಯನ್ನು ಕೋರಿ ಒಂದು ನಿಮಿಷದ ಮೌನ ಪ್ರಾರ್ಥನೆ ಮಾಡಲಾಯಿತು.

ಸ್ಕೌಟ್ ವಿಭಾಗದ ನೇತೃತ್ವವನ್ನು ಶ್ರೀ ಶಿವರುದ್ರಪ್ಪನವರು ಮತ್ತು ಶ್ರೀಮತಿ ಭಾರತಿಯವರು ಗೈಡ್ ವಿಭಾಗದ ನೇತೃತ್ವ ವಹಿಸಿದ್ದರು. ರ್‍ಯಾಲಿಯ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀಮತಿ ಕೆ.ಎಸ್. ಕಮಲ ವಹಿಸಿದ್ದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಬಿ.ಆರ್. ವೇಣುಗೋಪಾಲ ಕೃಷ್ಣ ಪ್ರಶಸ್ತಿ ಪತ್ರಗಳನ್ನು ವಿತರಿಸಿದರು.

## ರಾಯಚೂರು ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಟಾಗೋರ ಸ್ಮಾರಕ ಪ್ರೌಢಶಾಲೆ ಮತ್ತು ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರಿಯ ವಿಶ್ವವಿದ್ಯಾನಿಲಯ ಸಂಯುಕ್ತ ಆಶ್ರಯದಲ್ಲಿ ವ್ಯಕ್ತಿತ್ವ ವಿಕಾಸ ಹಾಗು ಆರೋಗ್ಯ ಶಿಕ್ಷಣದ ಬಗ್ಗೆ ಉಪನ್ಯಾಸ ಹಮ್ಮಿಕೊಳ್ಳಲಾಗಿತ್ತು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಡಾ॥ ಆರ್. ನರಸಿಂಹಮೂರ್ತಿ ಜಿಲ್ಲಾ ಆಯುಕ್ತರು ಭಾಗವಹಿಸಿ ಮಕ್ಕಳಿಗೆ ಪಠ್ಯೇತರ ವಿಷಯಗಳು ಪರಿಣಾಮಕಾರಿಯಾಗುವುವು ಎಂದರು. ಸಂಚಾಲಕಿ ಶ್ರೀಮತಿ ಬಿ.ಕೆ. ಸ್ಮಿತಾ ಅಕ್ಕನವರು ರಾಷ್ಟ್ರಗೀತೆಯ ಅರ್ಥವನ್ನು ವಿವರಿಸಿದರು.

ಪ್ರಾಸ್ತಾವಿಕವಾಗಿ ಶ್ರಿ ಅಮರೇಗೌಡ ಪಾಟೀಲ ರವರು ರಾಜ್ಯ ಪುರಸ್ಕಾರ ಪ್ರಶಸ್ತಿಗಳನ್ನು ವಿತರಿಸಲಾಯಿತು. ಎಸ್. ಕಳಸಾಪುರ ಶಿಕ್ಷಕಿ ಸ್ವಾಗತಿಸಿದರು, ಖಾಬಾಹುಸೇನ್ ಆನಾಹೊಸೂರ ವಂದಿಸಿದರು. 500 ಮಕ್ಕಳು ಭಾಗವಹಿಸಿದ್ದರು.

****************************

### ರಾಷ್ಟ್ರೀಯ ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮ

ರಾಯಚೂರು ನಗರದ ಐ.ಬಿ. ರಸ್ತೆ, ದುಂಬಾ ನರ್ಸಿಂಗ್ ಹೋಮ್ ಘಟಕದಲ್ಲಿ ರಾಷ್ಟ್ರೀಯ ಪೋಲಿಯೋ ನಿರ್ಮೂಲನಾ ಕಾರ್ಯಕ್ರಮವನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಆಶ್ರಯದಲ್ಲಿ ಹಮ್ಮಿಕೊಳ್ಳಲಾಯಿತು.

****************************

### ಸ್ಕೌಟ್ಸ್ ಮಕ್ಕಳ ಕಾರ್ಯಕ್ಕೆ ಪ್ರಶಂಸೆ

ರಾಯಚೂರು ಜಿಲ್ಲೆಯ ಮಾನ್ವಿ ಬಾಗಲವಾಡ ಗ್ರಾಮದ ಸರ್ಕಾರಿ ಪದವಿಪೂರ್ವ ಕಾಲೇಜಿನ ಸ್ಕೌಟ್ಸ್ ದಳ ಕಾರ್ಯಚಟುವಟಿಕೆ ವೀಕ್ಷಣೆಗೆ ಫ್ರಾನ್ಸ್‌ನ ಸ್ಕೌಟ್ಸ್ ರಾಯಭಾರಿಗಳಾದ ಜೇಮ್ಸ್ ಎಂಬ ಶಿಕ್ಷಕಿ ಹಾಗೂ ವಿದ್ಯಾರ್ಥಿಗಳಾದ ಎಮಿಲಿ, ಎಲಿಸ ಮತ್ತು ಹೆನ್ಲೊ ಅವರು ಭೇಟಿ ನೀಡಿದ್ದರು..

ಕಾಲೇಜಿನ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಶಿಸ್ತು, ಕಾರ್ಯದಕ್ಷತೆ ಮತ್ತು ದೇಶಪ್ರೇಮದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ನೇತಾಜಿ ದಳದ ಸ್ಕೌಟ್ಸ್ ಮಾಸ್ಟರ್ ಎಚ್. ಹುಸೇನ್‌ಪೀರ್, ನೆಹರು ದಳದ ಸ್ಕೌಟ್ಸ್ ಮಾಸ್ಟರ್ ಜಿ. ನಾಗೇಶಗೌಡ ಸ್ಕೌಟ್ಸ್ ಕಾರ್ಯ ಚಟುವಟಿಕೆ ಬಗ್ಗೆ ವಿವರಿಸಿದರು.

## ಕೊಪ್ಪಳ ಜಿಲ್ಲೆ

ದಿನಾಂಕ : 08-12-2008 ರಂದು ಯಲಬುರ್ಗ ಮತ್ತು ಕುಷ್ಟಗಿ ತಾಲ್ಲೂಕುಗಳಲ್ಲಿ ಒಂದು ದಿನದ 'ಬ್ಯಾಡ್ಜ್ ವರ್ಕ್' ಕ್ಯಾಂಪನ್ನು ನಡೆಸಲಾಯಿತು. ಈ ಶಿಬಿರದಲ್ಲಿ ಒಟ್ಟು 40 ಮಕ್ಕಳೂ 6 ಸ್ಕೌಟ್ ಮಾಸ್ಟರ್ ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು. ಮೊರಾರ್ಜಿ ದೇಸಾಯಿ ವಸತಿ ಶಾಲಾ ಮುಖ್ಯಸ್ಥರು ಹಾಗೂ ಸಿಬ್ಬಂದಿ ವರ್ಗವು ಈ ಶಿಬಿರವನ್ನು ಉತ್ತಮವಾಗಿ ವ್ಯವಸ್ಥೆ ಮಾಡಿದರು.

ಶಿಬಿರದಲ್ಲಿ ಯಲಬುರ್ಗ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಶರಣಪ್ಪ ಜತ್ತಿ ಕಾರ್ಯದರ್ಶಿಗಳು, ಶಾಲಾ ಪ್ರಾಚಾರ್ಯರಾದ ಶ್ರೀ ಯಲ್ಲಪ್ಪ ನವರು ಭಾಗವಹಿಸಿದ್ದರು.

## ಗುಲ್ಬರ್ಗಾ ಜಿಲ್ಲೆ

ದಿನಾಂಕ : 21-12-2008 ರಂದು ರಾಷ್ಟ್ರೀಯ ಪಲ್ಸ್ ಪೋಲಿಯೋ ಕಾರ್ಯಕ್ರಮವನ್ನು ಏರ್ಪಡಿಸಿದ್ದು, ಜಿಲ್ಲೆಯ ವಿವಿಧ ಶಾಲೆಯ 200 ಸ್ಕೌಟ್ಸ್-ಗೈಡ್ಸ್ ಮತ್ತು ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿ ಮಕ್ಕಳನ್ನು ಲಸಿಕಾ ಕೇಂದ್ರಕ್ಕೆ ಕರೆತಂದು ಹನಿ ಹಾಕಲು ಸಹಾಯ ಮಾಡಿದರು.

ಗ್ರಾಮೀಣ ಪ್ರದೇಶದಲ್ಲೂ ಕೂಡ ಈ ಕಾರ್ಯಕ್ರಮ ಯಶಸ್ವಿಯಾಗಲು ಸ.ಪ.ಪೂ. ಕಾಲೇಜು ತೆಂಗಳಿ. ಜಿ. ಚಿತ್ತಾಪೂರ, ಸ.ಪ.ಪೂ.ಕಾಲೇಜು ಔರಾದ್ 'ಬಿ' ಸರಕಾರಿ ಮಾದರಿ ಪ್ರಾಥಮಿಕ ಶಾಲೆ, ಗುಂಡಗುರ್ತಿಯ ಸ್ಕೌಟ್ಸ್-ಗೈಡ್ಸ್‌ಗಳು. ಮನೆ ಮನೆಗೆ ಹೋಗಿ ಪ್ರಚಾರ ಮಾಡುತ್ತ ಮಕ್ಕಳನ್ನು ಲಸಿಕಾ ಕೇಂದ್ರಕ್ಕೆ ಕರೆತಂದು ಹನಿ ಹಾಕಲು ಸಹಾಯ ಮಾಡಿದರು.

****************************

ದಿನಾಂಕ 17-11-2008 ರಿಂದ 20-11-08 ರ ವರೆಗೆ ಸರಕಾರಿ ಹಿ. ಪ್ರಾ. ಶಾಲೆ ಔರಾದ 'ಬಿ' ತಾ॥ ಜಿ॥ ಗುಲಬರ್ಗಾ ದಲ್ಲಿ ಪಟಾಲಂ ನಾಯಕರ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರಕ್ಕೆ 170 ಸ್ಕೌಟ್ಸ್, 86 ಗೈಡ್ಸ್, 10 ಸ್ಕೌಟ್ ಮಾಸ್ಟರ್ಸ್, 6 ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು.

ದಿನಾಂಕ 19-11-2008ರಂದು ರಾಜ್ಯ ಪುರಸ್ಕಾರ ಪರೀಕ್ಷೆಯನ್ನು ಏರ್ಪಡಿಸಿದ್ದು ಈ ಪರೀಕ್ಷೆಗೆ 79 ಸ್ಕೌಟ್ಸ್ ಮಕ್ಕಳು ಹಾಜರಿದ್ದರು. 20-11-08 ರಂದು ಗೈಡ್ಸ್ ರಾಜ್ಯ ಪುರಸ್ಕಾರ ಪರೀಕ್ಷೆಯನ್ನು ಏರ್ಪಡಿಸಲಾಗಿತ್ತು. 54 ಗೈಡ್ಸ್ ಪರೀಕ್ಷೆಗೆ ಹಾಜರಿದ್ದರು.

ಪಟಾಲಂ ನಾಯಕರ ಶಿಬಿರಕ್ಕೆ ಶ್ರೀ ಎಂ. ಗೋಪಾಲರಾವ ನಾಯಕರಾಗಿದ್ದರು. ಗೈಡ್ ವಿಭಾಗಕ್ಕೆ ಶ್ರೀಮತಿ ಪ್ರೇಮಲತಾ ಎಂ. ಇವರು ನಾಯಕಿಯಾಗಿದ್ದರು. ವೀರಭದ್ರಯ್ಯ- ಯಡಹಳ್ಳಿ ಡಿ.ಓ.ಸಿ. ಯವರು ಪಟಾಲಂ ನಾಯಕರ ಎರಡು ಶಿಬಿರಗಳಿಗೆ ಸಂಯೋಜಕರಾಗಿ ಕಾರ್ಯನಿರ್ವಹಿಸಿದರು.

## ದಾವಣಗೆರೆ ಜಿಲ್ಲೆ

ದಿನಾಂಕ : 03-12-2008 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಮುಂಬೈ ಉಗ್ರಗಾಮಿಗಳ ದಾಳಿಯಲ್ಲಿ ಹುತಾತ್ಮರಾದ ವೀರ ಯೋಧರಿಗೆ ಹಾಗೂ ಅಮಾಯಕ ಆತ್ಮಗಳಿಗೆ ಶಾಂತಿಕೋರಿ ಸರ್ವಧರ್ಮ ಪ್ರಾರ್ಥನೆ ಮತ್ತು ಶ್ರದ್ಧಾಂಜಲಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಾಗಿತ್ತು. ಸುಮಾರು 250 ಸ್ಕೌಟ್ಸ್ ಮತ್ತು ಗೈಡ್ಸ್, ಸಾರ್ವಜನಿಕರು, ಸ್ಕೌಟರ್ಸ್, ಗೈಡರ್ಸ್ ಹಾಗೂ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು, ವಿವಿಧ ಧರ್ಮೀಯರು ಸೇರಿ ಸರ್ವಧರ್ಮ ಪ್ರಾರ್ಥನಾ ಸಭೆಯನ್ನು ನಡೆಸುವುದುರ ಮೂಲಕ ಶ್ರದ್ಧಾಂಜಲಿ ಸಲ್ಲಿಸಿದರು.

ಶ್ರಿ ಸಂದೀಪ್ ಪಾಟೀಲ್, ಪೋಲಿಸ್ ವರಿಷ್ಠಾಧಿಕಾರಿಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಕರ್ನಲ್ ಅನಿಲ್ ಕುಮಾರ್ ಶ್ರೀಧರನ್, ಎನ್.ಸಿ.ಸಿ. ಕಮ್ಯಾಂಡಿಂಗ್ ಆಫೀಸರ್, ಶ್ರೀ ಅಣ್ಣಯ್ಯ, ಎನ್.ಸಿ.ಸಿ. ಕಮ್ಯಾಂಡಿಂಗ್ ಆಫೀಸರ್ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಶ್ರೀ ಮಹಮ್ಮದ್ ವಾಸಿಲ್ ಶ್ರಿ ಎ.ಪಿ. ಷಡಾಕ್ಷರಪ್ಪ, ಶ್ರೀ ಎ. ಶಿವಪ್ಪ, ಶ್ರೀ ಎಸ್. ಶಂಕರ್ ನಾಯ್ಕ್, ಶ್ರೀ ಬಿ.ವಿ. ವಿಶ್ವನಾಥ್, ಶ್ರಿಮತಿ ಸಿದ್ಧಮ್ಮ ಭಾಗವಹಿಸಿದ್ದರು.

****************************

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಹರಿಹರ ಮತ್ತು ಆರಕ್ಷಕ ಠಾಣೆ ಹರಿಹರ ನಗರ ಇವರ ಸಂಯುಕ್ತಾಶ್ರಯದಲ್ಲಿ ದಿನಾಂಕ 16-12-2008 ರಂದು ನಗರದ ಬಾಬಾ ಸಾಹೇಬ್ ಅಂಬೇಡ್ಕರ್ ಶಾಲಾ ಆವರಣದಲ್ಲಿ ಸಂಚಾರಿ ನಿಯಮಗಳು ಹಾಗೂ ನಕ್ಸಲ್ ಭಯೋತ್ಪಾದಕರು ಇವುಗಳ ಬಗ್ಗೆ ವಿಶೇಷ

ಮಾಹಿತಿಯ ಮೂಲಕ ಜಾಗೃತಿ ಮೂಡಿಸಲು ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ಮುಖ್ಯ ಅತಿಥಿಗಳಾಗಿ ನಗರ ಸಭಾಸದಸ್ಯರಾದ ಶ್ರೀಮತಿ ರಾಧ ಹುಲುಗೇಶ ಸಿ.ಎನ್. ಇವರು ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಕಾರ್ಯಕ್ರಮ ಯಶಸ್ವಿಯಾಗಲೆಂದು ಹಾರೈಸಿದರು.

ಈ ಕಾರ್ಯಕ್ರಮದಲ್ಲಿ ಸುಮಾರು 250 ವಿದ್ಯಾರ್ಥಿಗಳು ಹಾಗು ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು.

## ಬೆಳಗಾವಿ ಜಿಲ್ಲೆ

### ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಮೇಳ

ಬೆಳಗಾವಿಯ ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆ, ಅಥಣಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಸ್ಥಳೀಯ ಸಂಸ್ಥೆ ಮತ್ತು ಜಿಲ್ಲಾ ಸಂಸ್ಥೆ, ಸಂಯುಕ್ತಾಶ್ರಯದಲ್ಲಿ ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆಯ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳವನ್ನು ದಿನಾಂಕ 16-12-2008 ರಂದು ಶ್ರೀಗಚ್ಚಿನ ಮಠ, ಅಥಣಿ ಇಲ್ಲಿ ತುಂಬಾ ಸಡಗರದಿಂದ ನಡೆಸಲಾಯಿತು.

ಸಮಾರಂಭದ ಸಾನ್ನಿಧ್ಯವನ್ನು ಅಥಣಿಯ ಗಚ್ಚಿನಮಠದ ಶ್ರೀಗಳು ಹಾಗೂ ಮೋಟಗಿ ಮಠದ ಶ್ರೀಗಳು ವಹಿಸಿದ್ದರು. ಅಧ್ಯಕ್ಷತೆಯನ್ನು ಶ್ರೀ ಬಿ. ಬಸವರಾಜಪ್ಪ ಕೆ.ಇ.ಎಸ್. ಉಪನಿರ್ದೇಶಕರು ಸಾ.ಶಿ. ಇಲಾಖೆ ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆ ಇವರು ವಹಿಸಿದ್ದರು. ಉದ್ಘಾಟನೆಯನ್ನು ಶ್ರೀ ಜಿ.ಎಂ. ಪಾಟೀಲ್, ಸಹಾಯಕ ರಾಜ್ಯ ಸ್ಕೌಟ್ ಆಯುಕ್ತರು, ಬೆಳಗಾವಿ ವಿಭಾಗ ಬೆಳಗಾವಿ ಇವರು ಜ್ಯೋತಿ ಬೆಳಗುವದರೊಂದಿಗೆ ನೆರವೇರಿಸಿದರು.

ಒಟ್ಟು 3,000 ಸ್ಕೌಟ್ಸ್ ಮತ್ತು ಗೈಡ್ಸ್, ಸ್ಕೌಟರ್ಸ್ ಮತ್ತು ಗೈಡರ್ಸ್, ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆಯ 8 ವಲಯಗಳಿಂದ ಆಗಮಿಸಿದ್ದರು.

ಸಾಂಸ್ಕೃತಿಕ ಕಾರ್ಯಕ್ರಮಗಳು, ಶಿಬಿರಾಗ್ನಿ ಹಾಗೂ ಅಥಣಿ ನಗರದ ಪ್ರಮುಖ ಬೀದಿಗಳಲ್ಲಿ ಕೈಗೊಂಡ ಪಥ-ಸಂಚಲನ, ಮಕ್ಕಳ ಮೇಳದ ಪ್ರಮುಖ ಆಕರ್ಷಕ ಕಾರ್ಯಕ್ರಮ ಗಳಾಗಿದ್ದವು.

ಶ್ರೀ ಜಿ.ಬಿ. ಮಣ್ಣಿಕೇರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗು ಸಹಾಯಕ ಜಿಲ್ಲಾ ಸ್ಕೌಟ್ ಆಯುಕ್ತರು ಅಥಣಿ ಇವರು ಮೇಳವನ್ನು ಸಂಘಟಿಸಿದ್ದರು.

### ಕಾಗವಾಡ್ ವಲಯ - ಸ್ಕೌಟರ್ಸ್-ಗೈಡರ್ಸ್ ಸಮಾವೇಶ

ದಿನಾಂಕ 1-12-2008 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದ ಸಭಾಭವನ-ಕಾಗವಾಡ್ ಇಲ್ಲಿ ಕಾಗವಾಡ ವಲಯದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ಏರ್ಪಡಿಲಾಗಿತ್ತು. ಶ್ರೀ ವಿ.ಜಿ. ಪೋಳ, ಕೆ.ಇ.ಎಸ್. ಕ್ಷೇತ್ರ ಶಿಕ್ಷಣಾಧಿಕಾರಿಗಳು ಕಾಗವಾಡ ಇವರು ಅಧ್ಯಕ್ಷತೆ ವಹಿಸಿದ್ದರು.

ಈ ಸಂದರ್ಭದಲ್ಲಿ ಇಲಾಖೆಯ ಹಾಗೂ ವಲಯ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಆರ್.ಎ. ನಿಂಬಾಳಕರ. ಶ್ರೀ ಡಿ.ಬಿ. ಪಾಟನಕರ್, ಶ್ರೀ ಎಂ.ಕೆ. ಕಾಂಬಳೆ ಹಾಗೂ ಒಟ್ಟು 70 ಸ್ಕೌಟರ್ಸ್-ಗೈಡರ್ಸ್ ಉಪಸ್ಥಿತರಿದ್ದರು.

### ನಿಪ್ಪಾಣಿ ವಲಯ - ಸ್ಕೌಟರ್ಸ್-ಗೈಡರ್ಸ್ ಸಮಾವೇಶ.

ದಿನಾಂಕ : 2-12-2008 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಭಾಭವನ ನಿಪ್ಪಾಣಿ. ಇಲ್ಲಿ ನಿಪ್ಪಾಣಿ ವಲಯದ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಸಮಾವೇಶವನ್ನು ಏರ್ಪಡಿಸಲಾಗಿತ್ತು. ಶ್ರೀ ಪುಂಡಲೀಕ ಬೆಳಕೇರಿ ಮ್ಯಾನೇಜರರು ಬಿ.ಇ.ಓ. ಕಾರ್ಯಾಲಯ ನಿಪ್ಪಾಣಿ

ಇವರು ಜ್ಯೋತಿ ಬೆಳಗಿಸುವುದರೊಂದಿಗೆ ಸಮಾವೇಶವನ್ನು ಉದ್ಘಾಟಿಸಿದರು. ಶ್ರೀಮಗದುಮ್ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ನಿಪ್ಪಾಣಿ. ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ನಾಗೇಶ್ ಶಿವಾಪೂರ ಇವರು ಸ್ಕೌಟ್ಸ್ ಧ್ವಜ ದಿನಾಚರಣೆ ಮಹತ್ವ ಮತ್ತು ಘಟಕಗಳ ನವೀಕರಣಕ್ಕೆ ಸಂಬಂಧಿಸಿದಂತೆ – ಮಾಹಿತಿ ನೀಡಿದರು. ಈ ಸಂದರ್ಭದಲ್ಲಿ ಶ್ರೀ ಲಂಗೋಟಿ, ಶ್ರೀ ಬುದ್ಧನ್ನವರ್, ಶ್ರೀ ಮಲ್ಲಾಬಾದಿ ಶ್ರೀ ಹಂಡಿ, ಶ್ರೀ ಪಾಟೀಲ. ಶ್ರೀಮತಿ ಶಿರೋಳೆ, ಶ್ರೀಮತಿ ಖೋತ ಹಾಗೂ ಒಟ್ಟು 70 ಸ್ಕೌಟರ್ಸ್–ಗೈಡರ್ಸ್ ಶಿಕ್ಷಕರು ಉಪಸ್ಥಿತರಿದ್ದರು.

**ಬೈಲ ಹೊಂಗಲ ವಲಯ –ಸ್ಕೌಟರ್ಸ್–ಗೈಡರ್ಸ್ ಸಮಾವೇಶ**

ದಿನಾಂಕ 10–12–2008 ರಂದು ಎಂ.ಎಸ್.ಎಸ್.ಆರ್. ಹೈಸ್ಕೂಲ್ ಸಭಾಭವನ ಬೈಲಹೊಂಗ; ಇಲ್ಲಿ ಬೈಲಹೊಂಗಲ ವಲಯದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ ಏರ್ಪಡಿಸಲಾಗಿತ್ತು.

ಶ್ರೀ ವಣ್ಣೂರ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬೈಲ ಹೊಂಗಲ ಇವರು ಸಮಾವೇಶದ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಎ.ಐ. ಇಂಗಳಗಿ ಶಿಕ್ಷಣ ಸಂಯೋಜಕ ಶ್ರೀ ಎಸ್.ಎಸ್. ಬಳಿಗಾರ ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಹಾಗೂ ವಲಯದ ಎಲ್ಲ ಸಮೂಹ ಸಹಾಯಕ ಶಿಕ್ಷಣಾಧಿಕಾರಿಗಳು, ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

ಈ ಕಾರ್ಯಕ್ರಮದಲ್ಲಿ ಒಟ್ಟು 200 ಸ್ಕೌಟರ್ಸ್–ಗೈಡರ್ಸ್, ಭಾಗವಹಿಸಿದ್ದರು.

**ಬೈಲಹೊಂಗಲ – ಸಿ.ಆರ್.ಸಿ. ಮಟ್ಟದ ಮಕ್ಕಳ ರ್‍ಯಾಲಿ**

ದಿನಾಂಕ 15–12–2008 ರಂದು ಪ್ರಾಥಮಿಕ ಹಾಗೂ ಪ್ರೌಢಶಾಲೆ, ದೇವರಶೀಗಿ ಹಳ್ಳಿ, ಸಿ.ಆರ್.ಸಿ. ಎಂ.ಕೆ. ಹುಬ್ಬಳ್ಳಿ ತಾ॥ ಬೈಲಹೊಂಗಲ. ಇಲ್ಲಿ ಸಿ.ಆರ್.ಸಿ. ಮಟ್ಟದ ಸ್ಕೌಟ್ಸ್ ಗಳ ರ್‍ಯಾಲಿಯನ್ನು ಶ್ರಿ ಬಡಿಗೇರ ಸಮೂಹ ಸಹಾಯಕ ಶಿಕ್ಷಣಾಧಿಕಾರಿ ಶ್ರೀ ಎಂ.ಕೆ. ಹುಬ್ಬಳ್ಳಿ, ಶ್ರೀ ಹೆದ್ದೂರಿ ಸಿ.ಆರ್.ಸಿ. ಅಧಿಕಾರಿ ಎಂ.ಕೆ. ಹುಬ್ಬಳ್ಳಿ ಇವರು ಎರ್ಪಡಿಸಿದ್ದರು.

ಅಧ್ಯಕ್ಷತೆಯನ್ನು ಶ್ರೀ ಕೊಡಚವಾಡ ಸದಸ್ಯರು ದೇವರೇಗಿಹಳ್ಳಿ ಗ್ರಾಮಪಂಚಾಯಿತಿ. ಇವರು ವಹಿಸಿದ್ದರು. ಶ್ರೀ ಎ.ಐ. ಇಂಗಳಗಿ ಶಿಕ್ಷಣ ಸಂಯೋಜಕರು ಸಾ.ಶಿ. ಇಲಾಖೆ ಬೈಲಹೊಂಗಲ ಇವರು ಜ್ಯೋತಿ ಬೆಳಗುವದರೊಂದಿಗೆ ರ್‍ಯಾಲಿಯನ್ನು ಉದ್ಘಾಟಿಸಿದರು. ಶ್ರೀ ನಾಗೇಶ ಶಿವಪೂರ, ಶ್ರೀ ಎಸ್.ವಿ. ಗಣಾಚಾರಿ ಪ್ರಾಥಮಿಕ ಹಾಗೂ ಪ್ರೌಢಶಾಲೆ ದೇವರ ಶೀಗಿಹಳ್ಳಿಯ ಮುಖ್ಯೋಪಾಧ್ಯಾಯರು ಮತ್ತು ಸಿಬ್ಬಂಧಿ. ಗ್ರಾಮದ ಗಣ್ಯರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

600 ಸ್ಕೌಟ್ಸ್–ಗೈಡ್ಸ್‌ಗಳು ಹಾಗೂ ಶಿಕ್ಷಕರು ಭಾಗವಹಿಸಿದ್ದರು.

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣದ ಮಾಹಿತಿ ಶಿಬಿರ ಬೆಳಗಾವಿ ನಗರ ವಲಯ**

ದಿನಾಂಕ 13–12–2008 ರಂದು ಸೆಂಟ್ರಲ್ ಸ್ಕೂಲ್ ಬೆಳಗಾವಿ ನಗರ ಇಲ್ಲಿ ನಗರ ವಲಯದ ಅನುದಾನಿತ, ಅನುದಾನರಹಿತ ಮತ್ತು ಸರಕಾರಿ ಶಾಲೆಗಳ ಮುಖ್ಯೋಪಾಧ್ಯಾಯರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣದ ಮಾಹಿತಿ ಶಿಬಿರ ಹಮ್ಮಿಕೊಳ್ಳಲಾಗಿತ್ತು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎ.ಬಿ. ಮುಂಡಲೀಕ ಕ್ಷೇತ್ರ ಶಿಕ್ಷಣಾಧಿಕಾರಿಗಳು, ನಗರವಲಯ ಬೆಳಗಾವಿ ಇವರು ವಹಿಸಿದ್ದರು. ಶ್ರೀ ಎಸ್.ಸಿ. ಕಟ್ಟಿಮನಿ ದೈ.ಶಿ.ವಿ. ಪರಿವೀಕ್ಷಕರು,

ಬೆಳಗಾವಿ ಉಪಸ್ಥಿತರಿದ್ದರು. ಒಟ್ಟು 150 ಮುಖ್ಯೋಪಾಧ್ಯಾಯರು ಭಾಗವಹಿಸಿದ್ದರು.

**ರಾಯಭಾಗ ವಲಯ**

ದಿನಾಂಕ 26-12-2008 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಭಾಭವನ ರಾಯಭಾಗ ಇಲ್ಲಿ ರಾಯಭಾಗ ವಲಯದ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣದ ಮಾಹಿತಿ ಶಿಬಿರ ಹಮ್ಮಿಕೊಳ್ಳಲಾಗಿತ್ತು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎ.ಎಸ್. ಜೋಡಗೇರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ರಾಯಭಾಗ ವಹಿಸಿದ್ದರು. ಶ್ರೀ ವಿ.ಆರ್. ದೇವರೆಡ್ಡಿ ಶ್ರೀ ಟಿ.ವಿ. ಗುದಗಾಪುರ ಬಿ.ಆರ್.ಸಿ ಮತ್ತು ಸಿ.ಆರ್.ಸಿ. ಅಧಿಕಾರಿಗಳು, ಬಿಸಿಯೂಟದ ಅಧಿಕಾರಿ ಹಾಗೂ ಸಮೂಹ ಸಹಾಯಕ ಶಿಕ್ಷಣಾಧಿಕಾರಿಗಳು ಮತ್ತು ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

## ಶಿವಮೊಗ್ಗ ಜಿಲ್ಲೆ

ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನದಲ್ಲಿ ದಿನಾಂಕ 20-12-2008 ರಿಂದ 21-12-2008 ರ ವರೆಗೆ ನಡೆದ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪದಕ ಕಾರ್ಯಾಗಾರದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಶಿವಮೊಗ್ಗ ನಗರ ಸಭೆ ಅಧ್ಯಕ್ಷರಾದ ಶ್ರೀ ಎಂ. ಶಂಕರ್‌ರವರು ಮಾತನಾಡುತ್ತಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸರ್ಕಾರ ಹೆಚ್ಚಿನ ಪ್ರೋತ್ಸಾಹ ನೀಡಬೇಕು. ನಮ್ಮ ನಗರಸಭೆಯಿಂದ ಹಿಂದುಳಿದ ಮಕ್ಕಳಿಗೆ ಐದುನೂರು ಸಮವಸ್ತ್ರಗಳನ್ನು ಕೊಡುವುದಾಗಿ ತಿಳಿಸಿದರು.

ಕಾರ್ಯಾಗಾರ ಶಿಬಿರದಲ್ಲಿ ಎರಡು ನೂರು ಮಕ್ಕಳು ಭಾಗವಹಿಸಿದ್ದರು. ಸಭೆಯ ಅಧ್ಯಕ್ಷತೆಯನ್ನು ಜಿಲ್ಲಾ ಸ್ಕೌಟ್ ಗೈಡ್ ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿಯವರು ವಹಿಸಿದ್ದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಪ್ರೊ.ಎ.ಎಸ್. ಚಂದ್ರ ಶೇಖರ್‌ರವರು ನಗರ ಸಭೆಯಿಂದ ಹೆಚ್ಚಿನ ನೆರವು ಅಪೇಕ್ಷಿಸಿ, ನಗರಸಭಾಧ್ಯಕ್ಷರಿಗೆ ಮನವಿಯನ್ನು ಅರ್ಪಿಸಿದರು. ಕಾರ್ಯಾಗಾರದ ಸಂಕ್ಷಿಪ್ತ ವರದಿಯನ್ನು ಶ್ರೀ ಎಂ.ಜಿ. ಶಿವಕುಮಾರ್ ವಾಚಿಸಿದರು. (ಶಿಬಿರದ ಮೊದಲ ದಿನ ಶಿವಮೊಗ್ಗ ನಗರದಲ್ಲಿ ಪಲ್ಸ್ ಪೋಲಿಯೋ ಕಾರ್ಯಕ್ರಮದ ಅಂಗವಾಗಿ ಸ್ಕೌಟ್ ಗೈಡ್‌ಗಳು ಜನ ಜಾಗೃತಿ ಜಾಥಾ ಹಮ್ಮಿಕೊಂಡಿದ್ದರು). ಸಾರ್ವಜನಿಕ ಶಿಕ್ಷಣ ಇಲಾಖೆಯ ಶ್ರೀ ಗಣಪತಿ, ಜಿಲ್ಲಾ ಉಪಯೋಜನಾ ಸಮನ್ವಯಾಧಿಕಾರಿಗಳು ಶಿಬಿರಕ್ಕೆ ಭೇಟಿ ನೀಡಿದ್ದರು.

## ಉತ್ತರ ಕನ್ನಡ ಜಿಲ್ಲೆ

ದಿನಾಂಕ : 6-12-2008 ರಂದು ಮಾರ್ಥೋಮಾ ಇಂಗ್ಲಿಷ್ ಮೀಡಿಯಂ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಹೊರ ಸಂಚಾರ ಮಾಡಿದರು.

ಧ್ವಜಕಾರ್ಯಕ್ರಮದ ಜೊತೆಗೆ ವಿವಿಧ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು. ದೇವಸ್ಥಾನದ ಅರ್ಚಕರಾದ ಶ್ರೀ ಮಹೇಶ್ ಭಟ್‌ರವರು ಕರಿಕಾನ ಪರಮೇಶ್ವರಿ ದೇವಸ್ಥಾನದ ಇತಿಹಾಸವನ್ನು ಸ್ಕೌಟ್ಸ್ ಗೈಡ್ಸ್‌ಗಳಿಗೆ ತಿಳಿಸಿದರು.

ದಿನಾಂಕ 7-12-2008 ರಂದು ಕಾಸರಗೋಡ್ ಸಮುದ್ರತೀರಕ್ಕೆ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳು ಹೊರಸಂಚಾರ ಕೈಗೊಂಡರು.

ಈ ಕಾರ್ಯಕ್ರಮದಲ್ಲಿ ಶ್ರೀ ಬಿ.ಡಿ.ಫರ್ನಾಂಡೀಸ್ ಡಿ.ಟಿ.ಸಿ. ಶ್ರೀ ಎಸ್.ಎಂ. ಲೋಪಿಸ್ ಡಿ.ಓ.ಸಿ. ಭಾಗವಹಿಸಿದ್ದರು ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಗೆ ಹಿತವಚನ ನೀಡಿ ಆಶೀರ್ವದಿಸಿದರು. ಈ ಕಾರ್ಯಕ್ರಮಕ್ಕೆ ಫಾದರ್ ಥೋಮಸ್ ಮ್ಯಾಥ್ಯೂ ಮತ್ತು

ಮುಖ್ಯಾಧ್ಯಾಪಕಿಯಾದ ಶ್ರೀಮತಿ ರ್‍ಯಾಚಲ್ ಥಾಮಸ್ ರವರು ಆಶೀರ್ವದಿಸಿ ಕಳುಹಿಸಿಕೊಟ್ಟರು.

## ದಕ್ಷಿಣ ಕನ್ನಡ ಜಿಲ್ಲೆ

ದಿನಾಂಕ : 2-11-2008 ರಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರಾಷ್ಟ್ರೀಯ ಮಟ್ಟದ ಚಿತ್ರಕಲಾ ಸ್ಪರ್ಧೆಯನ್ನು ಮಂಗಳೂರು ನಗರದಲ್ಲಿ ಸ್ಥಳೀಯ ಸಂಸ್ಥೆಯ ಸಂಯೋಗದಲ್ಲಿ ಗೈಡರ್ ಶ್ರೀಮತಿ ಸಂಧ್ಯಾರವರು ನಡೆಸಿದರು.

ದಿನಾಂಕ : 7-11-08 ರಿಂದ 14-11-08 ರ ವರೆಗೆ ಸ್ಕೌಟ್ಸ್-ಗೈಡ್ಸ್ ಸಪ್ತಾಹವನ್ನು ಆಚರಿಸಲಾಯಿತು- ಪೋಲೀಸ್ ಅಧಿಕಾರಿಗಳ ಸಹಕಾರದಿಂದ ಟ್ರಾಫಿಕ್ ಸಿಗ್ನಲ್ ಸ್ಕೌಟ್ಸ್-ಗೈಡ್ಸ್ ರೋವರ್ ರೇಂಜರ್ಸ್‌ಗಳಿಗೆ ಇವರುಗಳಿಗೆ ಕಲಿಸುವ ಮೂಲಕ ಸಪ್ತಾಹವು ಮುಕ್ತಾಯಗೊಂಡಿತು.

ದಿನಾಂಕ : 20-11-2008 ರಂದು ನೂತನ ಸ್ಥಳೀಯ ಸಂಸ್ಥೆ ಮುಡಿಪು ಇದರ ಉದ್ಘಾಟನಾ ಸಮಾರಂಭವು ಶ್ರೀ ಭಾರತಿ ಅನುದಾನಿತ ಪ್ರಾಥಮಿಕ ಶಾಲೆಯಲ್ಲಿ ರೋ, ಶ್ರೀ ಪಿ. ದೇವದಾಸ್ ಶೆಣ್ಯೆಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನ ದೀಪ ಬೆಳಗಿಸಿ ಉದ್ಘಾಟಿಸಿದರು.

ದಿನಾಂಕ : 20-11-2008 ರಂದು ಮುಲ್ಕಿ ಸ್ಥಳೀಯ ಸಂಸ್ಥೆಯ ಸ್ಕೌಟರ್ ಗೈಡರ್ ಹಾಗೂ ಮುಖ್ಯೋಪಾಧ್ಯಾಯರುಗಳಿಗೆ ಸ್ಕೌಟಿಂಗ್ ಗೈಡಿಂಗ್ ಮಾಹಿತಿ ಶಿಬಿರ ಸಿ.ಎಸ್.ಐ.ಪ್ರೌಢಶಾಲೆಯಲ್ಲಿ ಹಿರಿಯ ಶಿಕ್ಷಕರು ಮಹಾಪೋಷಕರಾದ ಶ್ರೀ ಸೋಮಪ್ಪ ಸುವರ್ಣ ರವರು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು.

ದಿನಾಂಕ : 27, 28 ಡಿಸೆಂಬರ್ 2008 ರಂದು ಕಬ್, ಬುಲ್‌ಬುಲ್ಸ್‌ಗಳ ಚತುರ್ಥಚರಣ ಹಾಗು ಹಿರೇಕ್ ಪಂಖ್ ಪರೀಕ್ಷೆಯನ್ನು ದಕ್ಷಿಣ ಕನ್ನಡ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳ ಇಲ್ಲಿ ನಡೆಸಲಾಯಿತು ಕಬ್ ವಿಭಾಗಕ್ಕೆ ಶ್ರೀ ರಾಮರಾವ್, ಹಾಗು ಬುಲ್ ಬುಲ್ಸ್ ವಿಭಾಗಕ್ಕೆ ಸಿಸ್ಟರ್ ಲೋರಿನ ನಾಯಕರಾಗಿ ನಾಯಕತ್ವದಲ್ಲಿ ಆಗಮಿಸಿದ್ದರು.

ದಿನಾಂಕ 28,29 ಡಿಸೆಂಬರ್ ದಕಿಣ ಕನ್ನಡ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳ ಇಲ್ಲಿ ಮಂಗಳೂರು ತಾಲ್ಲೂಕಿನ ಸ್ಕೌಟ್ಸ್ ಗೈಡ್ಸ್‌ಗಳ ತೃತಿಯ ಸೋಪಾನ ಪರೀಕ್ಷಾ ಶಿಬಿರವು ಶ್ರಿ ಸಂಜೀವಾರವರ ನಾಯಕತ್ವದಲ್ಲಿ ನಡೆಯಿತು.

ದಿನಾಂಕ 27, ಡಿಸೆಂಬರ್ 2008 ರಂದು ಮೂಡಬಿದ್ರೆ ಕಲ್ಲಮೂಂಡ್ಕೂರು ಸರ್ವೋದಯ ಪ್ರೌಢ ಶಾಲೆ. ಇಲ್ಲಿ ಹರ್ಷಕುಮಾರ್ ಎ.ಎಲ್.ಟಿ.[ಸ್ಕೌಟ್ಸ್] ಹಾಗೂ ಶ್ರೀಮತಿ ಶುಭ ಎ.ಎಲ್.ಟಿ.[ಗೈಡ್ಸ್] ಇವರ ನಾಯಕತ್ವದಲ್ಲಿ ತೃತೀಯ ಸೋಪಾನ ಪರೀಕ್ಷಾ ಶಿಬಿರ ನಡೆಯಿತು.

ದಿನಾಂಕ 27, 28 ಡಿಸೆಂಬರ್ 2008 ರಂದು ದ.ಕ.ಜಿ.ಪ. ಪ್ರಾ. ಶಾಲೆ ಮೂಡ ಬಂಟ್ವಾಳ ಇಲ್ಲಿ ಶ್ರೀ ಶಾಂತಾರಾಂ ಪ್ರಭು ಎಚ್.ಡಬ್ಲ್ಯೂ.ಬಿ.[ಸ್ಕೌಟ್ಸ್] ಇವರ ನಾಯಕತ್ವದಲ್ಲಿ ತೃತೀಯ ಸೋಪಾನ ಪರೀಕ್ಷಾ ಶಿಬಿರ ನಡೆಯಿತು.

ದಿನಾಂಕ 27, 28, ಡಿಸೆಂಬರ್ 2008 ರಂದು ಸುಧಾನಪ್ರೌಢಶಾಲೆ ಪುತ್ತೂರು ಇಲ್ಲಿ ಶ್ರೀ ವೆಂಕಟ್ರಮಣ ಭಟ್ಟ ಎ.ಎಲ್.ಟಿ.[ಸ್ಕೌಟ್ಸ್] ಹಾಗೂ ಶ್ರೀಮತಿ ಪ್ರಫುಲ್ಲ ಎಚ್.ಡಬ್ಲ್ಯೂ.ಬಿ.[ಗೈಡ್ಸ್] ಇವರ ನಾಯಕತ್ವದಲ್ಲಿ ತೃತೀಯ ಸೋಪಾನ ಪರೀಕ್ಷಾ ಶಿಬಿರ ನಡೆಯಿತು.

ದಿನಾಂಕ : 27, 28 ಡಿಸೆಂಬರ್ 2008 ರಂದು ದ.ಕ.ಜಿ.ಪ. ಪ್ರಾ ಶಾಲೆ ಉಪ್ಪಿನಂಗಡಿ ಪುತ್ತೂರು ಇಲ್ಲಿ ಶ್ರೀ ರವಿಂದ್ರನಾಥ ಶಿಶಿಲ ಎಚ್.ಡಬ್ಲ್ಯೂ.ಬಿ. [ಸ್ಕೌಟ್ಸ್] ಇವರ ನಾಯಕತ್ವದಲ್ಲಿ ತೃತೀಯ ಸೋಪಾನ ಪರೀಕ್ಷಾ ಶಿಬಿರ ನಡೆಯಿತು.

## Bangalore North

Sri Chamundi Scout Group celebrated its 90th anniversary on the 27th and 28th of December 2008, in their premises at Malleswaram. Col. Hardev Khatkar was the Chief Guest of the Day while Mr. Premkumar D.C.(S.) and Smt. Vanitha Narayan D.C.(G) were the guests of honour. District officials, Parents, Visitors and invitees were in large number. Bro. Bharat Sagar read out the annual Report for the 90th year ending 21st December 2008

On the 2nd day, Mr. Premkumar D.C.(S) was the Chief Guest. Smt. Ramalatha Jt. State Secretary (G.) graced the function

Both the days the Chief Guests expressed their happiness over the 90 years of Group's existence and its services for the Nation.

Sri K. Narasimhamurthy, Group Leader gave a brief account of the Group's 90 years' history as mile stones of the Group. Group honoured the merited cubs, bul-buls, scouts and Guides. Programme included the display of Camp Gadgets. Homages were paid to the departed souls of the Group, Martyrs of the recent Mumbai riots and unkonwn soldiers who laid down their lives for the sake of the Country.

Mr. Hanumareddy president of the Group's Trust presided over the function on both the days.

## ಬೆಂಗಳೂರು ದಕ್ಷಿಣ

**ಆನೇಕಲ್ ತಾಲೂಕು ಮಟ್ಟದ ಸ್ಕೌಟ್ಸ್ ಗೈಡ್ಸ್ ಬ್ಯಾಡ್ಜ್ ವರ್ಕ್ ಶಿಬಿರ.**

ಆನೇಕಲ್ ನಗರದ ಸರ್ಕಾರಿ ಹಳೆಯ ಮಾಧ್ಯಮಿಕ ಪಾಠ ಶಾಲೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲೂಕು ಸ್ಥಳೀಯ ಸಂಸ್ಥೆ ಹಮ್ಮಿಕೊಂಡಿದ್ದ ಪದಕ ತರಬೇತಿ ಶಿಬಿರವನ್ನು ಉದ್ಘಾಟಿಸುತ್ತಾ ಶಿಸ್ತು, ಸ್ನೇಹ ಮತ್ತು ಆತ್ಮೀಯತೆಯನ್ನು ವಿದ್ಯಾರ್ಥಿಗಳು ಮೈಗೂಡಿಸಿಕೊಳ್ಳಬೇಕು ಎಂದು ಶಾಸಕ ಶ್ರೀ ಎ. ನಾರಾಯಣಸ್ವಾಮಿ ವಿದ್ಯಾರ್ಥಿಗಳಿಗೆ ಕರೆ ನೀಡಿದರು.

ತಹಶೀಲ್ದಾರ್ ಮಲ್ಲಿಕಾರ್ಜುನ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ತಾಲೂಕು ಪಂಚಾಯ್ತಿ ಅಧ್ಯಕ್ಷ ಶ್ರೀ ಎಂ.ಟಿ. ನಾರಾಯಣ್, ಪುರಸಭಾ ಅಧ್ಯಕ್ಷೆ ಶ್ರೀಮತಿ ಪದ್ಮಾ ಮುನಿರಾಜು, ಉಪಾಧ್ಯಕ್ಷ ಶ್ರೀ ಕೆ. ನಾಗರಾಜು, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಜಿ.ಆರ್. ಬಸವರಾಜು, ಸಮೂಹ ಸಹಾಯಕ ಶಿಕ್ಷಣಧಿಕಾರಿ ಶ್ರೀಮತಿ ವಿಜಯಲಕ್ಷ್ಮಿ, ಕಾಂಮ್ ಕಾರ್ಡ್ ಡೆವಲಪರ್ಸ್‌ನ ವ್ಯವಸ್ಥಾಪಕ ನಿರ್ದೇಶಕ ಗೋಪಾಲರೆಡ್ಡಿ, ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷ ವಿ. ರಾಮಮೂರ್ತಿ ಉಪಾಧ್ಯಕ್ಷ ಶ್ರೀನಿವಾಸರೆಡ್ಡಿ, ಚಂದಾಪುರ, ಗ್ರಾ.ಪಂ. ಮಾಜಿ ಅಧ್ಯಕ್ಷ ಶ್ರೀ ನಾರಾಯಣ ರೆಡ್ಡಿ, ಸ್ಕೌಟ್ಸ್ ಸಂಸ್ಥೆಯ ಜಿಲ್ಲಾ ಪ್ರತಿನಿಧಿ ಶ್ರೀ ಆರ್.ಎಲ್. ನಾರಾಯಣಸ್ವಾಮಿ ಮೊದಲಾದವರು ಉಪಸ್ಥಿತರಿದ್ದರು.

ಸಂಜೆ ನಡೆದ ಸಮಾರೋಪ ಸಮಾರಂಭದಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷ ಶ್ರೀ ವಿ. ರಾಮಮೂರ್ತಿ ಅಧ್ಯಕ್ಷತೆ ವಹಿಸಿ ಮಾತನಾಡಿ ಮಕ್ಕಳು ಶಾಲಾ ಹಂತದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸೇರಿ ಅದನ್ನು ಅಲ್ಲಿಗೇ ಬಿಡದೆ ಮುಂದಿನ ಜೀವನದಲ್ಲೂ ತಮ್ಮನ್ನು ತಾವು ಈ ಸಂಸ್ಥೆಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬೇಕೆಂದು ನುಡಿದರು.

ಶಿಬಿರದ ನಾಯಕ ಮುನಿಕೃಷ್ಣಪ್ಪ ಶಿಬಿರದ ವರದಿ ಮಂಡಿಸಿದರು, ಕರ್ಪೂರು ಗ್ರಾ.ಪಂ. ಉಪಾಧ್ಯಕ್ಷ ಶ್ರೀ ಬಿ.ಪಿ. ರಮೇಶ್ ಶಿಕ್ಷಕರ ಸಂಘದ ಉಪಾಧ್ಯಕ್ಷ ಶ್ರೀನಿವಾಸರೆಡ್ಡಿ, ದೈಹಿಕ ಶಿಕ್ಷಣ ಮೇಲ್ವಿಚಾರಕ ಶ್ರೀ ರಾಥೋಡ್, ಮೊದಲಾದವರು ಉಪಸ್ಥಿತರಿದ್ದರು.

****************************

**ಭವ್ಯ ಶಿಬಿರಾಗ್ನಿ ಕಾರ್ಯಕ್ರಮ**

"ಜಾಗತಿಕ ಮಟ್ಟದಲ್ಲಿ ಭಾರತ ದೇಶದ ಭವ್ಯ ಪರಂಪರೆ ಹಾಗೂ ಸಂಸ್ಕೃತಿಯನ್ನು ಪ್ರಜ್ವಲಿಸುವಂತೆ ಮಾಡಿದ ಸ್ವಾಮಿ ವಿವೇಕಾನಂದರ ಜೀವನವನ್ನು ಎಲ್ಲರೂ ಆದರ್ಶವನ್ನಾಗಿ ಸ್ವೀಕರಿಸಬೇಕು" ಎಂದು ಕ್ಷೇತ್ರ ಸಮನ್ವಯ ಶಿಕ್ಷಣಾಧಿಕಾರಿ ಶ್ರೀ ಜಿ. ಗುರುಮೂರ್ತಿ ಕರೆನೀಡಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲೂಕು ಸಂಸ್ಥೆಯು ಆನೇಕಲ್ ಪಬ್ಲಿಕ್ ಶಾಲೆಯಲ್ಲಿ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆ ಅಂಗವಾಗಿ ಏರ್ಪಡಿಸಿದ್ದ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡತ್ತಿದ್ದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಜಿ.ಎಂ.ಆರ್. ಎಲೈಟ್ ಅಕಾಡೆಮಿಯ ಸಂಸ್ಥಾಪಕ ಶ್ರೀ ಜಿ. ಮುನಿರಾಜು ಮಾತನಾಡಿ ತ್ಯಾಗ ಹಾಗೂ ಸೇವೆಗಳನ್ನೇ ಧ್ಯೇಯವಾಗಿಟ್ಟುಕೊಂಡು ಇಡೀ ವಿಶ್ವಕ್ಕೇ ಮಾದರಿ ಪುರುಷರಾದ ಸ್ವಾಮಿ ವಿವೇಕಾನಂದರ ಜನ್ಮ ಸಾರ್ಥಕವಾದುದು ಎಂದರು.

ವಿವಿಧ ಶಾಲೆಗಳ ಮಕ್ಕಳು ನಾಟಕ, ರೂಪಕ, ನೃತ್ಯ, ಸಾಹಸ ಪ್ರದರ್ಶನ ಹಾಗೂ ಗೀತಗಾಯನ ದಂತಹ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರು.

ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

ಆರಕ್ಷಕ ಉಪನಿರೀಕ್ಷಕ ಶ್ರೀ ಚೇತನ್ ಕುಮಾರ್, ಅಕ್ಷರಜ್ಯೋತಿ ಸಂಯೋಜಕ ಶ್ರೀ ಕೆ. ಚಂದ್ರಶೇಖರ್, ಶ್ರೀ ಎ.ಪಿ.ಎಸ್. ಶಾಲೆಯ ಕಾರ್ಯದರ್ಶಿ ಶ್ರೀ ಟಿ. ಉಪೇಂದ್ರ ಪತ್ರಕರ್ತರಾದ ಶ್ರೀ ಕೆ. ಶಿವಣ್ಣ, ಶ್ರೀ ಮುನಿರಾಜು, ಸಮೂಹ ಸಂಪನ್ಮೂಲ ವ್ಯಕ್ತಿ ಮುನಿಕೃಷ್ಣಪ್ಪ, ಮುಖ್ಯ ಶಿಕ್ಷಕ ತ್ಯಾಗರಾಜು, ಸುನಿತಾ ಕುಮಾರಿ, ಭಗತ್ ಸಿಂಗ್ ಓಪನ್ ಮೊದಲಾದವರು ಉಪಸ್ಥಿತರಿದ್ದರು.

****************************

**ಬನ್ನೇರುಘಟ್ಟದ "ಸುವರ್ಣಮುಖಿ" ಪವಿತ್ರ ಸ್ಥಳದ ಸುತ್ತಲಿನ ಆವರಣದ ಸ್ವಚ್ಛತೆ**

ಆನೇಕಲ್ ತಾಲೂಕಿನ ವ್ಯಾಪ್ತಿಯ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಹಿಂಬದಿಯಲ್ಲಿ ದಟ್ಟ ಅರಣ್ಯದ ನಡುವೆ ಇರುವಂತಹ **"ಸುವರ್ಣಮುಖಿ"** ಎಂಬ ಪುಣ್ಯ ಕ್ಷೇತ್ರಕ್ಕೆ ಸಾವಿರಾರು ಸಂಖ್ಯೆಯಲ್ಲಿ ಭಕ್ತಾದಿಗಳು ಬಂದು ಹೋಗುವ ಹಿನ್ನೆಲೆಯಲ್ಲಿ ಈ ಅರಣ್ಯ ಪ್ರದೇಶದ ತುಂಬಾ ಪ್ಲಾಸ್ಟಿಕ್, ಪೇಪರ್ ಹಾಗೂ ಇನ್ನಿತರೆ ಅನವಶ್ಯಕ ಹಾಗೂ ಸ್ವಾಭಾವಿಕ ತ್ಯಾಜ್ಯ ಪದಾರ್ಥಗಳು ತುಂಬಿ ಹೋಗಿದ್ದವು.

ಇದರಿಂದ ಅರಣ್ಯಕ್ಕೆ ಹಾನಿಯಾಗುವ ಸತ್ಯವನ್ನು ಅರಿತ ಆನೇಕಲ್ ಭಗತ್ ಸಿಂಗ್ ಓಪನ್ ರೋವರ್ಸ್

ಹಾಗೂ ಚೆನ್ನಮ್ಮ ರೇಂಜರ್ಸ್ ತಂಡಗಳ ಗುಂಪಿನ ನಾಯಕ ಎ.ಎನ್. ನರೇಂದ್ರಕುಮಾರ್ ನೇತೃತ್ವದಲ್ಲಿ ದಿನಾಂಕ 17–01–2009 ರ ಶನಿವಾರದಂದು ಇಲ್ಲಿಗೆ ಬಂದು ಈ ಪ್ರದೇಶದ ಹಾಗೂ ಸುತ್ತಮುತ್ತಲಿನ ಅರಣ್ಯ ಪ್ರದೇಶದಲ್ಲಿ ಬಿದ್ದಿದ್ದಂತಹ ಎಲ್ಲಾ ಪ್ಲಾಸ್ಟಿಕ್ ಹಾಗೂ ಇತರೇ ಅಸ್ವಾಭಾವಿಕ ವಸ್ತುಗಳನ್ನು ಸಂಗ್ರಹಿಸಿ (ಸುಮಾರು 60ಕ್ಕೂ ಹೆಚ್ಚು ಚೀಲಗಳಾಗುವಷ್ಟು) ಇಲ್ಲಿನ ಅರಣ್ಯ ಇಲಾಖೆಯ ಮೇಲಧಿಕಾರಿಗಳಿಗೆ ನೀಡಿದರು.

**************

The Sixth District Level Camporee for Scouts & Guides was held at Kondajji Basappa Scout Guide Training Centre, Kondajji from 2nd to 6th January 2009. A total number of 600 Scouts & Guides participated in the Camporee.

Adventure activities like: 1) Ladder Crossing 2) Commando crossing 3) Wall Climbing 4) Self Pulling and Fun Based like: 1) Skating 2) Marksmanship 3) Basket ball 4) Fun Riding 5) Skill Walk were arranged.

The Camporee was inaugurated by Sri Kondajji B. Shanmukhappa, State Chief Commissioner on 2-1-2009, Sri L.S. Prabhudev, Executive Officer, Taluk Panchayat Davanagere was the Chief Guest & Sri Palani, D.C.(S.) presided

There was a Camp tour & route march where the Scouts & Guides went into the village & spread, the message of "don't use the plastics". There was a Food Plaza Inaugurated by Sri Mohamed Wasil, H.Q. Commissioner on 3-1-2009 Sri O. Veerabhdrappa, Chairman of Grama Panchayat, Kondajji was the Chief guest.

The Folk Festival was Inaugurated by Sri R.D. Murthy, Member of State Council, B.S.&.G on 4-1-2009. Where The Scouts & Guides and the Unit Leaders displayed there folk talent with traditional costumes and songs.

The peagent show was a spectacular event which was Inaugurated by Sri Murugarajendra Chigateri, D.C.C. Davenagere on 5-1-2009 and Sri C.S. Reddy was Guest of Honour. All the sub camps depicted the rich heritage and tradition of our State with colourful costumes items.

The grand Camp Fire wad declared open by Sri P. Nagaraj, E.O. Taluk Panchayat, Harihara on 5-1-2009 and Sri M.A. Chellaiah, H.Q. Commissioner (Publication) was the Guest of Honour.

The All faith prayer was inaugurated by Sri. S. Marulasiddaiah, founder secretary, Swamy Vivekananda Residential School, Davanagere on 6-1-2009.

Sri B.P. Harish, M.L.A., Harihara Constituency was the Chief quest for the Valeldictory Function on 6-1-2009 and Sri M.K. Khan, D.C.C. Bangalore South were presided.

Mr. T.K. Narayanaswamy was the Camporee Director. Mr. M.S. Satheesh District Secretary & Mr. A.S. Madhusudhan, Asst. Dist. Secretary, Co-ordinated the event. The event was supervised by the District Chief Commmissioner Sri M.K. Khan.





Sri Chamundi Scout Group Celebrated its 90th Anniversary on 27th and 28th Dec-08 at Malleswaram B'lore. Col. V.C. Haridev KhatKar Inagurated this Celebration. Mr. Premkumar, Dist. Commissioner(S), Smt. Vanitha Narayan, Dist. Commissioner(G), Sri Hanumareddy, President of Chamundi Scout Group and other District officials were present on this Occasion.



ದಿನಾಂಕ 3-12-2008 ದಾವಣಗೆರೆ ಜಿಲ್ಲಾ ಸಂಸ್ಥೆ ಮುಂಬೈ ಉಗ್ರಗಾಮಿಗಳ ದಾಳಿಯಲ್ಲಿ ಹುತಾತ್ಮರಾದ ವೀರಯೋಧರಿಗೆ ಹಾಗೂ ಅಮಾಯಕರುಗಳಿಗೆ ಗೌರವಸಲ್ಲಿಸಲು ಏರ್ಪಸಿದ್ದ ಸರ್ವಧರ್ಮ ಪ್ರಾರ್ಥನೆ ಮತ್ತು ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿ ಶ್ರೀಸಂದೀಪ್ ಪಾಟೀಲ್, ಎನ್.ಸಿ.ಸಿ. ಕಮ್ಯಾಂಡಿಂಗ್ ಆಫೀಸರ್, ಕರ್ನಲ್ ಅನಿಲ್ ಕುಮಾರ್ಶ್ರೀಧರನ್ ಹಾಗು ಕಮ್ಯಾಂಡಿಂಗ್ ಆಫೀಸರ್ ಶ್ರೀ ಅಣ್ಣಯ್ಯ,
ಶ್ರೀಮಹಮದ್ ವಾಸಿಲ್, ಶ್ರೀಮುರುಘ ರಾಜೇಂದ್ರ, ಜೆ. ಚಿಗಟೇರಿ, ಶ್ರೀಪಿ. ಷಡಾಕ್ಷರಪ್ಪ ಹಾಗು ಇತರ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಮತ್ತು ಸ್ಕೌಟ್ಸ್-ಗೈಡ್ಸ್, ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.




ದಿನಾಂಕ 12-01-2009ರಂದು ಉಡುಪಿ ಜಿಲ್ಲೆ ಮಣಿಪಾಲದಲ್ಲಿ ನಡೆದ ರಾಷ್ಟ್ರೀಯ ಯುವ ದಿನಾಚರಣೆ ಕಾರ್ಯಕ್ರಮದಲ್ಲಿ ಜಿಲ್ಲಾ ಗೈಡ್ಸ್ ಆಯುಕ್ತೆ ಶ್ರೀಮತಿ ರಾಜಲಕ್ಷ್ಮಿ ಡಿ. ಶೆಟ್ಟಿ ಮಾತನಾಡುತ್ತಿರುವುದು. ಶ್ರೀ ರಬೀಂದ್ರ ಪಿ. ನಾಯಕ್ ಅಧ್ಯಕ್ಷತೆ ವಹಿಸಿದ್ದರು. ಪ್ರೊ.ಪಿ.ದಯಾನಂದ ಶೆಟ್ಟಿ, ಶ್ರೀ ಗಣೇಶ್ ರಾವ್, ರೋಟರಿ ಕಾರ್ಯದರ್ಶಿ, ಶ್ರೀಮತಿ ಪುಷ್ಪಾ ಗಣೇಶ್‌ರಾವ್, ಸ್ಥ.ಸಂ.ಕಾರ್ಯದರ್ಶಿ, ಶ್ರೀ ಗುಣಕರಶೆಟ್ಟಿ ಉಪಸ್ಥಿತರಿದ್ದರು.



ಸ್ಕೌಟ್-ಗೈಡ್ ಸಪ್ತಾಹದ ಅಂಗವಾಗಿ ದಿನಾಂಕ 2-11-2008 ರಿಂದ 14-11-2008ರವರೆಗೆ ಮಂಗಳೂರಿನ ಜಿಲ್ಲಾ ಸ್ಕೌಟ್-ಗೈಡ್ ಭವನದಲ್ಲಿ ನಡೆದ ಟ್ರಾಫಿಕ್ ಸಿಗ್ನಲ್ ನಿಯಮಗಳ ತರಬೇತಿಯಲ್ಲಿ ತೊಡಗಿರುವ ಸ್ಕೌಟ್ಸ್-ಗೈಡ್ಸ್ ಹಾಗೂ ರೋವರ್-ರೇಂಜರ್ಸ್‌ಗಳು.



ದಿನಾಂಕ 6-12-08ರಂದು ಕರಿಕಾನ್ ಪರಮೇಶ್ವರಿ ಗುಡ್ಡಕ್ಕೆ ಕೈಗೊಂಡ ಹೊರ ಸಂಚಾರದಲ್ಲಿ ಭಾಗವಹಿಸಿದ ಉತ್ತರ ಕನ್ನಡ ಜಿಲ್ಲೆಯ ಸ್ಕೌಟ್ಸ್‌ಗಳು.





ದಿ. 12-01-09ರಂದು ಆನೇಕಲ್ ಸ್ಥಳೀಯ ಸಂಸ್ಥೆ ವತಿಯಿಂದ ಸ್ವಾಮಿ ವಿವೇಕಾನಂದರ ಜನ್ಮದಿನಾಚರಣೆ ಅಂಗವಾಗಿ ಏರ್ಪಡಿಸಿದ್ದ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಕ್ಷೇತ್ರ ಸಮನ್ವಯ ಶಿಕ್ಷಣಾಧಿಕಾರಿ ಶ್ರೀ ಜಿ.ಗುರುಮೂರ್ತಿ ಉದ್ಘಾಟಿಸಿದರು. ಸಮಾರಂಭದಲ್ಲಿ ಆರಕ್ಷಕ ಉಪ ನಿರೀಕ್ಷಕ ಶ್ರೀ ಚೇತನ್‌ಕುಮಾರ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರಕುಮಾರ್, ಶ್ರೀ ಕೆ. ಚಂದ್ರಶೇಖರ್, ಶ್ರೀ ಮುನಿಕೃಷ್ಣಪ್ಪ ಮುಂತಾದವರು ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಭಗತ್‌ಸಿಂಗ್ ರೋವರ್ ತಂಡ ಹಾಗೂ ರಾಣಿ ಚೆನ್ನಮ್ಮ ರೇಂಜರ್ ತಂಡಗಳಿಂದ ಬನ್ನೇರುಘಟ್ಟದ "ಸುವರ್ಣಮುಖಿ" ಸ್ಥಳದ ಸುತ್ತ-ಮುತ್ತ ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



ದಿ 12-10-09ರಂದು ಬೆಂಗಳೂರಿನ ಅಖಿಲ ಕರ್ನಾಟಕ ಮಕ್ಕಳ ಕೂಟದಲ್ಲಿ ರಾಜ್ಯ ಸಂಸ್ಥೆ ಏರ್ಪಡಿಸಿದ್ದ ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮದಿನಾಚರಣೆಯಲ್ಲಿ ಭಾಗವಹಿಸಿದ್ದ ಸ್ಕೌಟ್ಸ್-ಗೈಡ್ಸ್‌ಗಳ ವಿಹಂಗಮ ನೋಟ





ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆ ದಿ 2-01-09 ರಿಂದ 6-1-09 ರವರೆಗೆ ಕೊಂಡಜ್ಜಿ ಬಸಪ್ಪ ರಾಜ್ಯ ತರಬೇತಿ ಕೇಂದ್ರ, ಕೊಂಡಜ್ಜಿಯಲ್ಲಿ ಏರ್ಪಡಿಸಿದ್ದ ಜಿಲ್ಲಾ ಮಟ್ಟದ ಕ್ಯಾಂಪೂರಿಯಲ್ಲಿ ಸಾಹಸ ಚಟುವಟಿಕೆಗಳಲ್ಲಿ ತೊಡಗಿರುವ ಗೈಡ್ಸ್ ಹಾಗೂ ರೆಂಜರ್ಸ್‌ಗಳು.



ರಾಷ್ಟ್ರೀಯ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಗುಲ್ಬರ್ಗ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸಕ್ರಿಯವಾಗಿ ಭಾಗವಹಿಸಿದರು.



ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ರಾಯಚೂರು ಜಿಲ್ಲೆಯ ಸ್ಕೌಟರ್ ಶ್ರೀ.ಜಿ.ನಾಗೇಶಗೌಡ, ಜಿಲ್ಲಾ ಸಂಘಟನಾ ಆಯುಕ್ತೆ ಶ್ರೀಮತಿ ಭುವನೇಶ್ವರಿ, ಅಂಗನವಾಡಿ ಕಾರ್ಯಕರ್ತೆ ಶ್ರೀಮತಿ ಮಹಾಲಕ್ಷ್ಮಿ ಅವರನ್ನು ಕಾಣಬಹುದುದು.

ಸ್ಕೌಟ್ಸ್, ಗೈಡ್ಸ್ ಮತ್ತು ದಳ ನಾಯಕರುಗಳೇ : ಫೆಬ್ರವರಿ 01,2009ರಂದು ಪೋಲಿಯೊ ಲಸಿಕೆ ಹಾಕುವ ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ರಾಷ್ಟ್ರೀಯ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿರಿ.

-ರಾಜ್ಯ ಕಾರ್ಯದರ್ಶಿ


Regd as News Paper (Magazine) No : CPMG/KA/BGW-549/2006-08

Permitted to Post under WPP System
Vide No.: WPP-87 of SSP, BANGALORE WEST
Posted at: Bangalore City H.P.O. on 30-01-2009




ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

**Karnataka Scout & Guide**
*News Magazine*

**If not delivered, please return to :**


THE EDITOR, Karnataka Scout & Guide
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227


visit our website "**www.scout.org.in**" for details of Scout/Guide activities & On-line Karnataka Scout & Guide Magazine


Published for : The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.